ಶಾಕ್ಯ ಸಾಹಿತ್ಯ ಮಂಟಪದ ಮೊದಲನೆಯ ಉಪಪುಷ್ಪ

# ಪಾಲಿ ಪಜ್ಜ ಪುಷ್ಪಂಜಲಿ

ಅನುವಾದಕ–ಸಂಪಾದಕ:

ಜಿ. ಪಿ. ರಾಜರತ್ನಂ



“ಅತ್ಥಂ ಹಿ ನಾಥೋ ಸರಣಂ ಅವೋಚ ನ ವ್ಯಞ್ಜನಂ”

‘ಅರ್ಥವೇ ಮುಖ್ಯ, ಅಕ್ಷರವಲ್ಲ—

ಎಂದು ನಮ್ಮ ಸ್ವಾಮಿಯಾದ ಬುದ್ಧನು ಹೇಳಿದನು.’

ಶಾಕ್ಯ ಸಾಹಿತ್ಯ ಮಂಟಪ

೧೯೩೭] ಮಲ್ಲೇಶ್ವರ, ಬೆಂಗಳೂರು. [ಎಂಟಾಣೆ

## ರತ್ನನ ಬೌದ್ಧ ಗ್ರಂಥಗಳು—

೧. ಚೀನಾದೇಶದ ಬೌದ್ಧ ಯಾತ್ರಿಕರು

೨. ಧರ್ಮದಾನಿ ಬುದ್ಧ (ಮುಗಿದಿವೆ)

೩. ಗೌತಮ ಬುದ್ಧ (ಮಕ್ಕಳಿಗೆ)

೪. ಬುದ್ಧ ವಚನ ಪರಿಚಯ

(ಶಾಕ್ಯ ಸಾಹಿತ್ಯ ಮಂಟಪದ ಪ್ರಧಾನ ಪುಷ್ಪ—೧)

೫. ಪಾಲಿ ಪಜ್ಜ ಪುಷ್ಪಾಂಜಲಿ

(ಶಾಕ್ಯ ಸಾಹಿತ್ಯ ಮಂಟಪದ ಉಪಪುಷ್ಪ—೧)

೬. ನಾಲ್ಕು ಪಾಲೀ ಸೂತ್ರಗಳು

(ಶಾಕ್ಯ ಸಾಹಿತ್ಯ ಮಂಟಪದ ಉಪಪುಷ್ಪ—೨)

೭. ಮಿಲಿಂದ ಪ್ರಶ್ನೆ

(ಶಾಕ್ಯ ಸಾಹಿತ್ಯ ಮಂಟಪದ ಉಪಪುಷ್ಪ—೩)

೮. ಪಾಲೀ ಸಾಹಿತ್ಯ ಪರಿಚಯ*

(ಶಾಕ್ಯ ಸಾಹಿತ್ಯ ಮಂಟಪದ ಉಪಪುಷ್ಪ—೪)



* ೧೯೩೭ರ ಮೇ ತಿಂಗಳಿನಲ್ಲಿ ಪ್ರಕಟವಾಗುವುದು.

ಧರ್ಮಪ್ರಕಾಶ ಮುದ್ರಾಲಯ, ಮಂಗಳೂರು.

ಪೂಜನೀಯ

**ಎನ್. ಎಸ್. ಸುಬ್ಬರಾಯರಿಗೆ**

ಅವರ ಅಮೃತವಾದ ಅನುಕಂಪನಕ್ಕೆ

ಈ 'ಪಾಲಿ ಪಜ್ಜ ಪುಷ್ಫಂಜಲಿ'ಯನ್ನು

ಕೃತಜ್ಞತೆಯ ಗುರುತಾಗಿ

ಸಮರ್ಪಿಸುವೆನು.

# ತಿದ್ದುಪಡಿ

| ಸೂಚಿ | ತಪ್ಪು | ಒಪ್ಪು |
|---|---|---|
| ಕನ್ನಡ ಗಾಥಾ ೧೫, ೧೬, ೧೮ | ಅಥವ | ಅಥವಾ |
| ಕನ್ನಡ ಗಾಥಾ ೩೫ | ತೊಳಗವ | ತೊಳಗುವ |
| ಪಾಲೀ ಗಾಥಾ ೪೬ | ದುಕ್ಖಸ್ಸನ್ತಂ | ದುಕ್ಖಸ್ಸನ್ತಂ |
| ಪುಟ ೫೧೮ ಟಿಪ್ಪಣಿ | 'ಪಾಲೀ ಸಾಹಿತ್ಯ ಪರಿಚಯ' | 'ಬುದ್ಧವಚನ ಪರಿಚಯ' |
| ಕನ್ನಡ ಗಾಥಾ ೧೧೨, ೧೧೩, ೧೧೯ | ನಡಸು | ನಡಿಸು |

# ಪ್ರವೇಶ

ಪಾಲೀ ಸಾಹಿತ್ಯದಲ್ಲಿ ನಾನು ಓದಿ ಆನಂದಪಟ್ಟ ಭಾಗಗಳನ್ನು ನನಗೆ ಸಾಧ್ಯವಾದಷ್ಟು ಮಟ್ಟಿಗೆ ಕನ್ನಡದಲ್ಲಿ ತಿಳಿಸಬೇಕೆಂದು ಈ ಪ್ರಯತ್ನಕ್ಕೆ ತೊಡಗಿದ್ದೇನೆ. ಆ ಸಾಹಿತ್ಯದ ವಿವಿಧ ಜಾತಿಗಳನ್ನೂ ಅದಕ್ಕೆ ಆವಶ್ಯಕವಾದ ಇತಿಹಾಸ ವಿವರಗಳನ್ನೂ ನನ್ನ 'ಪಾಲೀ ಸಾಹಿತ್ಯ ಪರಿಚಯ'ದಲ್ಲಿ ಕಾಣಬಹುದು.

ಪಾಲೀ ಪದ್ಯಸಾಹಿತ್ಯದ ಉತ್ಕೃಷ್ಟ ಭಾಗಗಳನ್ನು ಭಾಷಾಂತರಿಸಿ ಮೂಲದೊಡನೆ ಕೊಡಬೇಕೆಂಬ ಯೋಜನೆಗೆ ಈ ಸಂಕಲನವು ಒಂದು ಪ್ರವೇಶ. ಮುಂದೆ ಒಂದು ಸಂಪುಟದಲ್ಲಿ ಇಂತಹ ಸಾವಿರಾರು ಗಾಹೆಗಳನ್ನೂ ಅವುಗಳ ಅನುವಾದವನ್ನೂ ಸಲ್ಲಿಸಲು ಯತ್ನಿಸುತ್ತಿದ್ದೇನೆ. ಈ ಗಾಥಾಸಾಹಿತ್ಯವನ್ನು ಒಳಗೊಂಡಿರುವ ಪಾಲೀ ಗ್ರಂಥಗಳನ್ನು ನನ್ನ 'ಪಾಲೀ ಸಾಹಿತ್ಯ ಪರಿಚಯ'ದಿಂದ ತಿಳಿಯಬಹುದು.

ಈ ಸಂಕಲನದಲ್ಲಿ, ವ್ಯಂಜನಕ್ಕಿಂತ ಮುಖ್ಯವಾಗಿ ಅರ್ಥವನ್ನು ಹಿಡಿದು, ಮೊದಲಿನ ಐವತ್ತು ಬಿಡಿ ಬಿಡಿ ಗಾಹೆಗಳಿಗೆ ಗದ್ಯಾನುವಾದವನ್ನೂ, ಅನಂತರದ ಆರು ಕಾವ್ಯಭಾಗಗಳಿಗೆ ಪದ್ಯಾನುವಾದವನ್ನೂ ಕೊಟ್ಟಿದೆ. ಪುಟದ ತುದಿಯ ಉದ್ಧೃತ ಭಾಗಗಳು ಗಾಥಾಪಾದಗಳು.

ಈ ಉದಾಹರಣೆಗಳಿಂದ ಪಾಲೀ ಗಾಥಾ ಸಾಹಿತ್ಯದ ಧೋರಣೆಯನ್ನು ಸ್ವಲ್ಪಮಟ್ಟಿಗೆ ತಿಳಿಯಬಹುದೆಂದು ನಂಬಿರುತ್ತೇನೆ.

ಮೂಲವನ್ನು ಓದುವಾಗ ಅಕ್ಷರಗಳ ಉಚ್ಚಾರಣೆಯೆಲ್ಲ ಎಂದಿನಂತೆಯೆ. ಆದರೆ, ಅನುಸ್ವಾರ ಬಂದಕಡೆ ಮಾತ್ರ ಅದನ್ನು 'ಮ'ಕಾರದಂತೆ ಉಚ್ಚರಿಸದೆ 'ಙ'ಕಾರದಂತೆ ಉಚ್ಚರಿಸಬೇಕು; 'ಕತ್ತಬ್ಬಂ ಕುಸಲಂ ಬಹುಂ' ಎಂಬುದನ್ನು 'ಕತ್ತಬ್ಬಙ್ ಕುಸಲಙ್ ಬಹುಙ್' ಎಂದು ಓದಬೇಕು.

ಸಾಹಿತ್ಯದ ಶ್ರದ್ಧೆಯಿಂದ ಸಿದ್ಧಗೊಳಿಸಿರುವ ಈ 'ಪಾಲೀ ಪದ್ಯ ಪುಷ್ಪಾಂಜಲಿ'ಯನ್ನು ಸಹೃದಯರ ಮಡಿಲಿನಲ್ಲಿ ಮಲಗಿಸಿದ್ದೇನೆ.

'ಶಾಕ್ಯ ಸಾಹಿತ್ಯ ಮಂಟಪ'
ಮಲ್ಲೇಶ್ವರ, ಬೆಂಗಳೂರು

ಜಿ. ಪಿ. ರಾಜರತ್ನಂ

## ಮಾತಿಕಾ



## ವಿಷಯ ವಿವರ

# ಪಾಲಿ ಪಜ್ಜ ಪುಪ್ಫಂಜಲಿ

ಎಂಬ

## ಪಾಲೀ ಪದ್ಯ ಪುಷ್ಪಾಂಜಲಿ

"ಏಕಂ ಹಿ ಸಚ್ಚಂ ನ ದುತೀಯಮತ್ಥಿ
ಯಸ್ಮಿಂ ಪಜಾ ನೋ ವಿವದೇ ಪಜಾನಂ"

— ಸುತ್ತನಿಪಾತ.

"ಸತ್ಯ ಒಂದೇ, ಎರಡನೆಯದಿಲ್ಲ;
ಇದನ್ನು ತಿಳಿದರೆ ಜನರು ವಿವಾದಮಾಡುವುದಿಲ್ಲ."

ಕರುಣಾಸೀತಲಹದಯಂ
ಪಞ್ಞಾಪಜ್ಜೋತವಿಹತಮೋಹತಮಂ
ಸನರಾಮರಲೋಕಗರುಂ
ವನ್ದೇ ಸುಗತಂ ಗತಿವಿಮುತ್ತಂ ॥

— ಸುಮಙ್ಗಲವಿಲಾಸಿನೀ.

## ೧. ಕತ್ತಬ್ಬಂ

೧. ಕೋ ನು ಹಾಸೋ ಕಿಮಾನನ್ದೋ
ನಿಚ್ಚಂ ಪಜ್ಜಲಿತೇ ಸತಿ ।
ಅನ್ಧಕಾರೇನ ಓನದ್ಧಾ
ಪದೀಪಂ ನ ಗವೇಸ್ಸಥ ॥ [೧]

— ಧಮ್ಮಪದ: ಗಾಥಾ ೧೪೬.

೨. ಸೋ ಕರೋಹಿ ದೀಪಮತ್ತನೋ ।
ಖಿಪ್ಪಂ ವಾಯಮ ಪಣ್ಡಿತೋ ಭವ
ನಿದ್ಧನ್ತಮಲೋ ಅನಙ್ಗಣೋ
ದಿಬ್ಬಂ ಅರಿಯಭೂಮಿಮೇಹಿಸಿ ॥ [೨]

— ಧಮ್ಮಪದ: ಗಾಥಾ ೨೩೬.

ಬುದ್ಧನ ಹೃದಯವು ಕರುಣೆಯಿಂದ ಶೀತಲವಾದುದು.
ಆತನ ಪ್ರಜ್ಞೆ[1]ಯು ಬೆಳಕಿಗೆ ಮೋಹ[2]ದ ಕತ್ತಲೆ ಹತವಾಯಿತು.
ಅವನು ಮನುಷ್ಯ ದೇವತೆಗಳ ಬಳಗದಲ್ಲಿ ಹಿರಿಯನು.
ಗತಿ[3]ಯಿಂದ ಬಿಡುಗಡೆ ಹೊಂದಿದ ಆ ಸುಗತ[4]ನನ್ನು ವಂದಿಸುತ್ತೇನೆ.

## ೧. ಕರ್ತವ್ಯ

ಸದಾ ಉರಿಯುತ್ತಿರುವಾಗ
ನಗು ಯಾರಿಗೆ? ಆನಂದವೇಕೆ?
ಕತ್ತಲೆ[5]ಯಿಂದ ಮುಚ್ಚಿ ಹೋದವರು ನೀವು
ದೀಪವನ್ನು ಹುಡುಕುವುದಿಲ್ಲವೆ? [೧]

ಈ ನೀನೇ ಆತ್ಮಕ್ಕೆ ದೀಪ ಮಾಡಿಕೊ.
ಬೇಗ ವ್ಯಾಯಾಮ[6]ಮಾಡು, ಪಂಡಿತನಾಗು.
ಕೊಳೆ[7]ಗಳು ಕಳೆದು ದೋಷ[7]ಗಳು ಇಲ್ಲದೆ
ದಿವ್ಯವಾದ ಆರ್ಯಭೂಮಿ[8]ಯನ್ನು ನೀನು ಸಾರುವೆ. [೨]

1. ಪ್ರಜ್ಞೆಯು ಸಾರಾಸಾರಗಳನ್ನು ವಿಮರ್ಶೆಮಾಡಿ ತಿಳಿಯುವ ಜ್ಞಾನ. 2. ಮೋಹವೆಂಬ ಗುಣವು ಮನಸ್ಸಿಗೆ ಒಂದು ತೆರದ ಮಂಕುಮುಚ್ಚಿ, ನಿಜವಾದ ಜ್ಞಾನವನ್ನು ಪಡೆಯುವುದಕ್ಕೆ ಅಡ್ಡಿಯಾಗುತ್ತದೆ. 3. ಒಂದು ಲೋಕವಲ್ಲಿ ಸತ್ತು ಇನ್ನೊಂದು ಲೋಕದಲ್ಲಿ ಹುಟ್ಟುವುದು, ಅಲ್ಲಿ ಸತ್ತು ಬೇರೊಂದು ಲೋಕದಲ್ಲಿ ಹುಟ್ಟುವುದು—-ಈ ರೀತಿಯ ಲೋಕಾಲೋಕ ಗಮನ. 4. ಸತ್ತು ಒಳ್ಳೆಯ ಗತಿ ಪಡೆದವನು; ಬುದ್ಧನ ಒಂದು ಹೆಸರು. 5. ಕತ್ತಲೆಯೆಂಬುದು ಅವಿದ್ಯೆಗೆ ಸಂಕೇತ ಶಬ್ದ; ನಿಜವಾದ ಜ್ಞಾನವನ್ನು ತಿಳಿಯದಿರುವುದೇ ಅವಿದ್ಯೆ. 6. ಗುರಿಯನ್ನು ಸಾಧಿಸಲು ಶ್ರದ್ಧೆಯಿಂದ ಮಾಡುವ ಪ್ರಯತ್ನ. 7. ರಾಗ, ದ್ವೇಷ, ಮೋಹ ಮುಂತಾದ ಕೆಟ್ಟಗುಣಗಳೇ ಕೊಳೆ ದೋಷಗಳು. 8. ಆರ್ಯಭೂಮಿ = ಶ್ರೇಷ್ಠವಾದ ಸ್ಥಳ, ಪರಮಪದ.

## ೨. ಜರಾ ಚ ಮಚ್ಚೂ ಚ

೧. ಯಥಾ ಪಿ ಸೇಲಾ ವಿಪುಲಾ
ನಭಮಾಹಚ್ಚ ಪಬ್ಬತಾ ।
ಸಮನ್ತಾನುಪರಿಯೇಯ್ಯುಂ
ನಿಪ್ಪೋಟೇನ್ತೋ ಚತುದ್ದಿಸಾ ।
ಏವಂ ಜರಾ ಚ ಮಚ್ಚೂ ಚ
ಅಧಿವತ್ತನ್ತಿ ಪಾಣಿನೋ ॥ [೩]

೨. ಖತ್ತಿಯೇ ಬ್ರಾಹ್ಮಣೇ ವೇಸ್ಸೇ
ಸುದ್ದೇ ಚಣ್ಡಾಲ ಪುಕ್ಕುಸೇ ।
ನ ಕಿಞ್ಚಿ ಪರಿವಜ್ಜೇತಿ
ಸಬ್ಬಮೇವಾಭಿಮದ್ದತಿ ॥ [೪]

೩. ನ ತತ್ಥ ಹತ್ಥೀನಂ ಭೂಮಿ
ನ ರಥಾನಂ ನ ಪತ್ತಿಯಾ ।
ನ ಚಾಪಿ ಮನ್ತಯುದ್ಧೇನ
ಸಕ್ಕಾ ಜೇತುಂ ಧನೇನ ವಾ ॥ [೫]

—ಸಂಯುತ್ತನಿಕಾಯ: ಕೋಸಲಸಂಯುತ್ತ: ತತಿಯವಗ್ಗ: ಪಬ್ಬತೂಪಮ.

## ೩. ಧಮ್ಮಪದಂ

೧. ಸಚ್ಚಂ ಭಣೇ ನ ಕುಜ್ಝೇಯ್ಯ
ದಜ್ಜಾಽಪ್ಪಸ್ಮಿಮ್ಪಿ ಯಾಚಿತೋ ।
ಏತೇಹಿ ತೀಹಿ ಠಾನೇಹಿ
ಗಚ್ಛೇ ದೇವಾನ ಸನ್ತಿಕೇ ॥ [೬]

— ಧಮ್ಮಪದ — ಗಾಥಾ ೨೨೪.

## ೨. ಮುಪ್ಪು, ಸಾವು

ಆಕಾಶವನ್ನು ಮುಟ್ಟುವ
ದೊಡ್ಡ ಕಲ್ಲಿನ ಪರ್ವತಗಳು
ನಾಲ್ಕು ದಿಕ್ಕುಗಳನ್ನೂ ಅಮುಕಿ ಒತ್ತುತ್ತ
ಸಂಪೂರ್ಣವಾಗಿ ಚಲಿಸಿ ಬರುವಂತೆ
ಮುಪ್ಪು ಸಾವುಗಳು
ಪ್ರಾಣಿಗಳ ಮೇಲೆ ಉರುಳಿಬರುವುವು. [೩]

ಕ್ಷತ್ರಿಯರು, ಬ್ರಾಹ್ಮಣರು, ವೈಶ್ಯರು,
ಶೂದ್ರರು, ಚಂಡಾಲರು, ಪುಕ್ಕುಸರು[1] —
ಯಾರನ್ನೂ ಮುಪ್ಪು ಸಾವುಗಳು ಬಿಡುವುದಿಲ್ಲ;
ಎಲ್ಲರನ್ನೂ ಒಂದೇ ತೆರನಾಗಿ ಹೊಸಗಿಬಿಡುವುವು. [೪]

ಅಲ್ಲಿ ಆನೆಗಳಿಗೆ ಸ್ಥಳವಿಲ್ಲ,
ರಥಗಳಿಗಿಲ್ಲ, ಕಾಲಾಳುಗಳಿಗಿಲ್ಲ;
ಅಲ್ಲದೆ ಮಂತ್ರಯುದ್ಧದಿಂದ ಅಥವಾ
ಹಣದಿಂದ ಗೆಲ್ಲಲೂ ಶಕ್ಯವಿಲ್ಲ. [೫]

## ೩. ಧರ್ಮಪದ

ಸತ್ಯ ಹೇಳಿದರೆ, ಕೋಪಿಸದಿದ್ದರೆ,
ಬೇಡಿದಾಗ ಕೊಂಚವಾದರೂ ಕೊಟ್ಟರೆ,
ಈ ಮೂರು ಮೆಟ್ಟಲುಗಳಲ್ಲಿ
ದೇವತೆಗಳ ಸಮೀಪಕ್ಕೆ ಹೋಗುವನು. [೬]

1. ಪುಕ್ಕುಸರು ಒಂದು ಬೇರಕೆ ಜಾತಿ; ಹೀನ ಜಾತಿಗಳಲ್ಲಿ ಅತಿ ಹೀನರಾದವರು. ಸಾಮಾನ್ಯವಾಗಿ ಚಂಡಾಲ, ನಿಷಾದ(ಬೇಟೆಗಾರ), ವೇಣ(ಬೊಂಬಿನ ಕೆಲಸಮಾಡುವವನು), ರಥಕಾರ ಎಂಬ ಕುಲಗಳ ಕೊನೆಯಲ್ಲಿ ಪುಕ್ಕುಸರ ಹೆಸರು ಬರುತ್ತದೆ.

## ೪. ಅಪ್ಪಮಾದಂ

೧. ಉಟ್ಠಹಥ ನಿಸೀದಥ
ದಳ್ಹಂ ಸಿಕ್ಖಥ ಸನ್ತಿಯಾ ।
ಮಾ ವೋ ಪಮತ್ತೇ ವಿಞ್ಞಾಯ
ಮಚ್ಚುರಾಜಾ ಅಮೋಹಯಿತ್ಥ ವಸಾನುಗೇ ॥ [೭]

— ಸುತ್ತನಿಪಾತ: ವಗ್ಗ ೨: ಸುತ್ತ ೧೦: ಗಾಥಾ ೨.

೨. ನಗರಂ ಯಥಾ ಪಚ್ಚನ್ತಂ
ಗುತ್ತಂ ಸನ್ತರಬಾಹಿರಂ ।
ಏವಂ ಗೋಪೇಥ ಅತ್ತಾನಂ
ಖಣೋ ವೇ ಮಾ ಉಪಚ್ಚಗಾ ।
ಖಣಾತೀತಾ ಹಿ ಸೋಚನ್ತಿ
ನಿರಯಮ್ಹಿ ಸಮಪ್ಪಿತಾ ॥ [೮]

— ಧಮ್ಮಪದ: ಗಾಥಾ ೩೧೫.

೩. ಅಪ್ಪಮಾದೋ ಅಮತಪದಂ
ಪಮಾದೋ ಮಚ್ಚುನೋ ಪದಂ
ಅಪ್ಪಮತ್ತಾ ನ ಮೀಯನ್ತಿ
ಯೇ ಪಮತ್ತಾ ಯಥಾಮತಾ । [೯]

— ಧಮ್ಮಪದ: ಗಾಥಾ ೨೧.

## ೫. ಧಮ್ಮಪದಂ

೧. ಅಕ್ಕೋಧೇನ ಜಿನೇ ಕೋಧಂ
ಅಸಾಧುಂ ಸಾಧುನಾ ಜಿನೇ ।
ಜಿನೇ ಕದರಿಯಂ ದಾನೇನ ।
ಸಚ್ಚೇನಾಽಲಿಕವಾದಿನಂ ॥ [೧೦]

— ಧಮ್ಮಪದ: ಗಾಥಾ ೨೨೩.

## ೪. ಅಪ್ರಮಾದ

ಎದ್ದೇಳಿರಿ! ಕುಳಿತುಕೊಳ್ಳಿರಿ!
ಶಾಂತಿಗಾಗಿ ದೃಢವಾಗಿ ಶಿಕ್ಷಿಸಿಕೊಳ್ಳಿರಿ!
ನಿಮ್ಮ ಪ್ರಮತ್ತತೆಯನ್ನು ತಿಳಿದು ನಿಮ್ಮನ್ನು
ಮೃತ್ಯುರಾಜನು ವಶಮಾಡಿಕೊಂಡು ಮೋಹಗೊಳಿಸದಿರಲಿ. [೭]

ಒಳಗು ಹೊರಗುಗಳು ರಕ್ಷಿಸಲ್ಪಟ್ಟ
ಗಡಿನಾಡಿನ ನಗರ ಹೇಗೋ
ಹಾಗೆ ಆತ್ಮವನ್ನು ರಕ್ಷಿಸಿಕೊಳ್ಳಿರಿ.
ಒಂದು ಕ್ಷಣವನ್ನೂ ಬಿಡಬೇಡಿರಿ.
ಕ್ಷಣಗಳನ್ನು ಮೀರಿದವರು ಖಂಡಿತವಾಗಿ
ನರಕದ ಪಾಲಾಗಿ ಶೋಕಪಡುವರು. [೮]

ಅಪ್ರಮಾದವು ಅಮೃತ[1]ಕ್ಕೆ ದಾರಿ
ಪ್ರಮಾದವು ಮೃತ್ಯುವಿಗೆ ದಾರಿ
ಅಪ್ರಮತ್ತರು ಸಾಯುವುದಿಲ್ಲ
ಪ್ರಮತ್ತರು ಸತ್ತವರಂತೆಯೆ. [೯]

## ೫. ಧರ್ಮಪದ

ಶಾಂತಿಯಿಂದ ಕ್ರೋಧವನ್ನು ಜಯಿಸಬೇಕು;
ಕೆಟ್ಟುದನ್ನು ಒಳ್ಳೆಯುದರಿಂದ ಜಯಿಸಬೇಕು;
ಜಿಪುಣನನ್ನು ದಾನದಿಂದ,
ಸತ್ಯದಿಂದ ಸುಳ್ಳಾಡುವವನನ್ನು, ಜಯಿಸಬೇಕು. [೧೦]

---

1. ಅಮೃತವೆಂಬುದು ನಿರ್ವಾಣಕ್ಕೆ ಪ್ರತಿನಾಮ.

## ೬. ಚಿತ್ತಂ

೧. ಫನ್ದನಂ ಚಪಲಂ ಚಿತ್ತಂ
ದೂರಕ್ಖಂ ದುನ್ನಿವಾರಯಂ ।
ಉಜುಂ ಕರೋತಿ ಮೇಧಾವೀ
ಉಸುಕಾರೋ ವ ತೇಜನಂ ॥ [೧೧]

— ಧಮ್ಮಪದ: ಗಾಥಾ ೩೩.

೨. ಇದಂ ಪುರೇ ಚಿತ್ತಮಚಾರಿ ಚಾರಿತಂ ।
ಯೇನಿಚ್ಛಕಂ ಯತ್ಥಕಾಮಂ ಯಥಾಸುಖಂ
ತದಜ್ಜಹಂ ನಿಗ್ಗಹೇಸ್ಸಾಮಿ ಯೋನಿಸೋ ।
ಹತ್ಥಿಪ್ಪಭಿನ್ನಂ ವಿಯ ಅಙ್ಕುಸಗ್ಗಹೋ ॥ [೧೨]

— ಧಮ್ಮಪದ: ಗಾಥಾ ೩೨೬.

೩. ಯಥಾ ಅಗಾರಂ ದುಚ್ಛನ್ನಂ
ವುಟ್ಠಿ ಸಮತಿವಿಜ್ಝತಿ ।
ಏವಂ ಅಭಾವಿತಂ ಚಿತ್ತಂ
ರಾಗೋ ಸಮತಿವಿಜ್ಝತಿ ॥ [೧೩]

೪. ಯಥಾ ಅಗಾರಂ ಸುಚ್ಛನ್ನಂ
ವುಟ್ಠಿ ನ ಸಮತಿವಿಜ್ಝತಿ ।
ಏವಂ ಸುಭಾವಿತಂ ಚಿತ್ತಂ
ರಾಗೋ ನ ಸಮತಿವಿಜ್ಝತಿ ॥ [೧೪]

— ಧಮ್ಮಪದ: ಗಾಥಾ ೧೩, ೧೪.

೫. ಮನಸಾ ಚೇ ಪದುಟ್ಠೇನ
ಭಾಸತಿ ವಾ ಕರೋತಿ ವಾ
ತತೋ ನಂ ದುಕ್ಖಮನ್ವೇತಿ
ಚಕ್ಕಂ ವ ವಹತೋ ಪದಂ [೧೫]

## ೬. ಚಿತ್ತ

ಚಿತ್ತವು ಚಂಚಲವು, ಚಪಲವು,
ಕಾಪಾಡಲು ಕಷ್ಟ, ತಡೆಯಲು ಕಷ್ಟ;
ಬಾಣಮಾಡುವವನು ಬಾಣವನ್ನು ಹೇಗೋ ಹಾಗೆ
ಮೇಧಾವಿಯು ಅದನ್ನು ನೇರವಾಗಿ ಮಾಡುವನು. [೧೧]

ಹಿಂದೆ, ಈ ಚಿತ್ತವು ಇಷ್ಟ ಬಂದ ಕಡೆ,
ಎಲ್ಲಿ ಬೇಕಾದರೆ ಅಲ್ಲಿ, ಹೇಗೆ ಸುಖವೆಂದರೆ ಹಾಗೆ ಸಂಚಾರಮಾಡಿತು;
ಅಂಕುಶ ಹಿಡಿದವನು ಮದದಾನೆಯನ್ನು ಹೇಗೋ ಹಾಗೆ
ಇಂದು ನಾನು ಅದನ್ನು ಸಮೂಲವಾಗಿ ನಿಗ್ರಹಿಸುತ್ತೇನೆ. [೧೨]

ಹೊದಿಕೆ ಸರಿಯಾಗಿಲ್ಲದ ಮನೆಗೆ
ಮಳೆ ನುಗ್ಗುವ ಹಾಗೆ
ಬೆಳಸದ ಚಿತ್ತಕ್ಕೆ
ರಾಗವು ನುಗ್ಗುವುದು. [೧೩]

ಹೊದಿಕೆ ಸರಿಯಾಗಿರುವ ಮನೆಗೆ
ಮಳೆ ನುಗ್ಗದ ಹಾಗೆ
ಸರಿಯಾಗಿ ಬೆಳಸಿದ ಚಿತ್ತಕ್ಕೆ
ರಾಗವು ನುಗ್ಗದು. [೧೪]

ಕೆಟ್ಟ ಕದಡಿದ ಮನಸ್ಸಿನಿಂದ
ಮಾತನಾಡಿದರೆ, ಅಥವ ಕೆಲಸ ಮಾಡಿದರೆ,
ಅದರಿಂದ ಅವನನ್ನು ದುಃಖ ಹಿಂಬಾಲಿಸುವುದು —
ವಾಹನದ ಹೆಜ್ಜೆಯನ್ನು ಚಕ್ರ ಹೇಗೋ ಹಾಗೆ. [೧೫]

೬. ಮನಸಾ ಚೇ ಪಸನ್ನೇನ
ಭಾಸತಿ ವಾ ಕರೋತಿ ವಾ
ತತೋ ನಂ ಸುಖಮನ್ವೇತಿ
ಛಾಯಾ ವ ಅನಪಾಯಿನೀ [೧೬]

— ಧಮ್ಮಪದ: ಗಾಥಾ ೧, ೨ (ಏಕಂಸೇನ).

೭ ದಿಸೋ ದಿಸಂ ಯಂ ತಂ ಕಯಿರಾ
ವೇರೀ ವಾ ಪನ ವೇರಿನಂ ।
ಮಿಚ್ಛಾಪಣಿಹಿತಂ ಚಿತ್ತಂ
ಪಾಪಿಯೋ ನಂ ತತೋ ಕರೇ ॥ [೧೭]

೮. ನ ತಂ ಮಾತಾ ಪಿತಾ ಕಯಿರಾ
ಅಞ್ಞೇ ವಾಪಿ ಚ ಞಾತಕಾ ।
ಸಮ್ಮಾಪಣಿಹಿತಂ ಚಿತ್ತಂ
ಸೇಯ್ಯಸೋ ನಂ ತತೋ ಕರೇ ॥ [೧೮]

— ಧಮ್ಮಪದ: ಗಾಥಾ ೪೨, ೪೩.

## ೭. ಕುಸಲಾಕುಸಲಂ

೧. ಯಥಾಪಿ ಪುಪ್ಫರಾಸಿಮ್ಹಾ
ಕಯಿರಾ ಮಾಲಾಗುಣೇ ಬಹೂ
ಏವಂ ಜಾತೇನ ಮಚ್ಚೇನ
ಕತ್ತಬ್ಬಂ ಕುಸಲಂ ಬಹುಂ ॥ [೧೯]

— ಧಮ್ಮಪದ: ಗಾಥಾ ೫೩.

೨. ಅಭಿತ್ಥರೇಥ ಕಲ್ಯಾಣೇ ।
ಪಾಪಾ ಚಿತ್ತಂ ನಿವಾರಯೇ ।
ದನ್ಧಂ ಹಿ ಕರೋತೋ ಪುಞ್ಞಂ
ಪಾಪಸ್ಮಿಂ ರಮತೀ ಮನೋ ॥ [೨೦]

— ಧಮ್ಮಪದ: ಗಾಥಾ ೧೧೬.

ತಿಳಿಯಾದ ಒಳ್ಳೆಯ ಮನಸ್ಸಿನಿಂದ
ಮಾತನಾಡಿದರೆ, ಅಥವ ಕೆಲಸ ಮಾಡಿದರೆ,
ಆದರಿಂದ ಅವನನ್ನು ಸುಖ ಹಿಂಬಾಲಿಸುವುದು —
ಬಿಟ್ಟು ಅಗಲದ ನೆರಳಿನ ಹಾಗೆ. [೧೬]

ದ್ವೇಷಿಯು ದ್ವೇಷಿಗೂ ವೈರಿಯು ವೈರಿಗೂ
ಏನೇನು ಮಾಡಿದರೂ,
ಸರಿಯಲ್ಲದುದರಲ್ಲಿ ನಿಲಿಸಿದ ಚಿತ್ತವು ಅವನಿಗೆ
ಅದಕ್ಕಿಂತ ಹೆಚ್ಚು ಕೇಡು ಮಾಡುವುದು. [೧೭]

ತಾಯಿ, ತಂದೆ, ಅಥವ
ಇತರ ಜ್ಞಾತಿಗಳು ಮಾಡದುದನ್ನು,
ಸರಿಯಾದುದರಲ್ಲಿ ನಿಲಿಸಿದ ಚಿತ್ತವು ಅವನಿಗೆ
ಅದಕ್ಕಿಂತ ಹೆಚ್ಚು ಮೇಲು ಮಾಡುವುದು. [೧೮]

## ೭. ಒಳ್ಳೆಯದು, ಕೆಟ್ಟದು

ಹೂಗಳ ರಾಶಿಯಿಂದ
ಅನೇಕ ಎಳೆಗಳ ಮಾಲೆಯನ್ನು ಮಾಡಬಹುದು.
ಹಾಗೆಯೆ, ಹುಟ್ಟಿದ ಮನುಷ್ಯನು
ಮಾಡಬೇಕಾದ ಒಳ್ಳೆಯ ಕೆಲಸಗಳು ಬಹಳ. [೧೯]

ಒಳ್ಳೆಯ ಕೆಲಸಗಳನ್ನು ಬೇಗ ಮಾಡು.
ಪಾಪದಿಂದ ಚಿತ್ತವನ್ನು ತಡೆ.
ಪುಣ್ಯವನ್ನು ಆಲಸ್ಯದಿಂದ ಮಾಡಿದರೆ
ಮನಸ್ಸು ಪಾಪದಲ್ಲಿ ರಮಿಸುವುದು. [೨೦]

೩. ಚಿರಪ್ಪವಾಸಿಂ ಪುರಿಸಂ
ದೂರತೋ ಸೋತ್ಥಿಮಾಗತಂ
ಞಾತಿಮಿತ್ತಾ ಸುಹಜ್ಜಾ ಚ
ಅಭಿನನ್ದನ್ತಿ ಆಗತಂ ॥ [೨೧]

೪. ತಥೇವ ಕತಪುಞ್ಞಮ್ಪಿ
ಅಸ್ಮಾ ಲೋಕಾ ಪರಂ ಗತಂ ।
ಪುಞ್ಞಾನಿ ಪಟಿಗಣ್ಹನ್ತಿ
ಪಿಯಂ ಞಾತೀ ವ ಆಗತಂ ॥ [೨೨]

— ಧಮ್ಮಪದ: ಗಾಥಾ ೨೧೯, ೨೨೦.

೫. ನ ತಂ ಕಮ್ಮಂ ಕತಂ ಸಾಧು
ಯಂ ಕತ್ವಾ ಅನುತಪ್ಪತಿ ।
ಯಸ್ಸ ಅಸ್ಸುಮುಖೋ ರೋದಂ
ವಿಪಾಕಂ ಪಟಿಸೇವತಿ ॥ [೨೩]

೬. ತಞ್ಚ ಕಮ್ಮಂ ಕತಂ ಸಾಧು
ಯಂ ಕತ್ವಾ ನಾನುತಪ್ಪತಿ ।
ಯಸ್ಸ ಪತೀತೋ ಸುಮನೋ
ವಿಪಾಕಂ ಪಟಿಸೇವತಿ ॥ [೨೪]

— ಧಮ್ಮಪದ: ಗಾಥಾ ೬೭, ೬೮.

೭. ನ ಹಿ ಪಾಪಂ ಕತಂ ಕಮ್ಮಂ
ಸಜ್ಜು ಖೀರಂ ವ ಮುಚ್ಚತಿ ।
ದಹಂ ತಂ ಬಾಲಮನ್ವೇತಿ
ಭಸ್ಮಚ್ಛನ್ನೋ ವ ಪಾವಕೋ ॥ [೨೫]

— ಧಮ್ಮಪದ: ಗಾಥಾ ೭೧.

ಬಲು ಹಿಂದೆ ಪ್ರವಾಸಹೋದ ಪುರುಷನು
ದೂರದಿಂದ ಸ್ವಸ್ತವಾಗಿ ಬಂದು
ತನ್ನ ಜ್ಞಾತಿ ಮಿತ್ರ ಸುಹೃದಯರನ್ನು
ಆನಂದಪಡಿಸುವನು. [೨೧]

ಅದರಂತೆಯೇ, ಪುಣ್ಯ ಮಾಡಿ
ಈ ಲೋಕದಿಂದ ಪರಲೋಕಕ್ಕೆ ಹೋದವನನ್ನು
ಪುಣ್ಯಗಳು ಎದುರುಗೊಂಡು ಒಯ್ಯುವುವು—
ಸ್ವಸ್ತವಾಗಿ ಬಂದ ಪ್ರಿಯನನ್ನು ಜ್ಞಾತಿಗಳು ಹೇಗೋ ಹಾಗೆ [೨೨]

ಯಾವುದನ್ನು ಮಾಡಿ ಅನುತಾಪಪಡುವನು,
ಯಾವುದರ ಪಕ್ವಫಲವನ್ನು ಅಳುತ್ತ
ಕಣ್ಣೀರಿನ ಮುಖದಿಂದ ಅನುಭವಿಸುವನು—
ಆ ಮಾಡಿದ ಕೆಲಸ ಒಳ್ಳೆಯದಲ್ಲ. [೨೩]

ಯಾವುದನ್ನು ಮಾಡಿ ಅನುತಾಪಪಡನು,
ಯಾವುದರ ಪಕ್ವಫಲವನ್ನು ಸಂತೋಷದಿಂದ
ಒಳ್ಳೆಯ ಮನಸ್ಸಿನಿಂದ ಅನುಭವಿಸುವನು—
ಆ ಮಾಡಿದ ಕೆಲಸ ಒಳ್ಳೆಯದು. [೨೪]

ಮಾಡಿದ ಪಾಪದ ಕೆಲಸ
ಹಾಲಿನ ಹಾಗೆ ಆಗಲೇ ಹುಳಿಯಾಗಿ ಒಡೆಯುವುದಿಲ್ಲ;
ಸುಡುತ್ತ, ಬೂದಿಮುಚ್ಚಿದ ಬೆಂಕಿಯಂತೆ,
ಆ ಅಜ್ಞಾನಿಯನ್ನು ಹಿಂಬಾಲಿಸುವುದು. [೨೫]

೮. ಅತ್ತನಾ ವ ಕತಂ ಪಾಪಂ
ಅತ್ತಜಂ ಅತ್ತಸಂಭವಂ ।
ಅಭಿಮನ್ಥತಿ ದುಮ್ಮೇಧಂ
ವಜಿರಂ ವಸ್ಮಮಯಂ ಮಣಿಂ ॥ [೨೬]

— ಧಮ್ಮಪದ: ಗಾಥಾ ೧೬೧.

೯. ಅಯಸಾ ವ ಮಲಂ ಸಮುಟ್ಠಿತಂ
ತದುಟ್ಠಾಯ ತಮೇವ ಖಾದತಿ ।
ಏವಂ ಅತಿಧೋನಚಾರಿನಂ
ಸಕಕಮ್ಮಾನಿ ನಯನ್ತಿ ದುಗ್ಗತಿಂ ॥ [೨೭]

— ಧಮ್ಮಪದ: ಗಾಥಾ ೨೪೦.

೧೦. ವಾಣಿಜೋ ವ ಭಯಂ ಮಗ್ಗಂ
ಅಪ್ಪಸತ್ಥೋ ಮಹದ್ಧನೋ ।
ವಿಸಂ ಜೀವಿತುಕಾಮೋ ವ
ಪಾಪಾನಿ ಪರಿವಜ್ಜಯೇ ॥ [೨೮]

೧೧. ಪಾಣಿಮ್ಹಿ ಚೇ ವಣೋ ನಾಸ್ಸ
ಹರೇಯ್ಯ ಪಾಣಿನಾ ವಿಸಂ ।
ನಾಬ್ಬಣಂ ವಿಸಮನ್ವೇತಿ
ನತ್ಥಿ ಪಾಪಂ ಅಕುಬ್ಬತೋ ॥ [೨೯]

— ಧಮ್ಮಪದ: ಗಾಥಾ ೧೨೩, ೧೨೪.

ತಾನು ಮಾಡಿ, ತನ್ನಲ್ಲಿ ಹುಟ್ಟಿ,
ತನ್ನಿಂದಲೇ ಆದ ಪಾಪವು
ಕೆಟ್ಟ ಬುದ್ಧಿಯುವನನ್ನು ಅರೆದುಬಿಡುವುದು—
ವಜ್ರವು ಕಲ್ಲಿನ ಮಣಿಯನ್ನು ಹೇಗೋ ಹಾಗೆ. [೨೬]

ಕಬ್ಬಿಣದಿಂದ ಎದ್ದ ಕೊಳೆಯು
ಅಲ್ಲಿ ಎದ್ದು ಅದನ್ನೇ ತಿನ್ನುವಂತೆ
ಅತಿಮೀರಿ ನಡೆಯುವವರನ್ನು[1]
ಅವರ ಕರ್ಮಗಳೆ ದುರ್ಗತಿಗೆ ಒಯ್ಯುತ್ತವೆ. [೨೭]

ಸ್ವಲ್ಪ ಸಹಾಯವೂ ಬಹಳ ಹಣವೂ ಉಳ್ಳ
ವ್ಯಾಪಾರಿಯು ಭಯದ ಮಾರ್ಗವನ್ನು ಹೇಗೋ ಹಾಗೆ,
ಬದುಕಲು ಬಯಸುವವನು ವಿಷವನ್ನು ಹೇಗೋ ಹಾಗೆ,
ಪಾಪಗಳನ್ನು ಸಂಪೂರ್ಣವಾಗಿ ಬಿಡಲಿ. [೨೮]

ಕೈಯಲ್ಲಿ ಗಾಯವಿಲ್ಲದಿದ್ದರೆ
ಕೈಯಿಂದ ವಿಷವೆತ್ತಬಹುದು.
ಗಾಯವಿಲ್ಲದವನಿಗೆ ವಿಷವೇರುವುದಿಲ್ಲ.
ಮಾಡದವನಿಗೆ ಪಾಪವಿಲ್ಲ. [೨೯]

---

1. ಭಿಕ್ಷುಗಳಿಗೆ ಬೇಕಾದ ಚೀವರವೆಂಬ ಬಟ್ಟೆ, ಪಿಂಡಪಾತ್ರವೆಂಬ ಭಿಕ್ಷಾಪಾತ್ರೆ, ಶಯನಾಸನವೆಂಬ ಹಾಸಿಗೆ ಪೀಠ, ರೋಗಬಂದಾಗ ಔಷಧಿ—ಎಂಬ ಈ ನಾಲ್ಕು ತೀರ ಆವಶ್ಯಕವಾದ ವಸ್ತುಗಳಿಗೆ 'ಧೋನ'ಗಳೆಂದು ಹೆಸರು. ಇವುಗಳಲ್ಲಿ ಆಚರಿಸಬೇಕಾದ ಮಿತಿಯನ್ನು ಮೀರಿ ಅತಿಯನ್ನು ಆಚರಿಸುವವರು 'ಅತಿಧೋನಚಾರಿ'ಗಳು. ಇದು ಬೌದ್ಧರ ವ್ಯಾಖ್ಯಾನ.

## ೮. ಮಾ ಜಾತಿಂ ಪುಚ್ಛ . . .

೧. ಮಾ ಜಾತಿಂ ಪುಚ್ಛ ಚರಣಞ್ಚ ಪುಚ್ಛ ।
ಕಟ್ಠಾ ಹವೇ ಜಾಯತಿ ಜಾತವೇದೋ ।
ನೀಚಾಕುಲೀನೋ ಪಿ ಮುನೀ ಧಿತೀಮಾ ।
ಆಜಾನಿಯೋ ಹೋತಿ ಹಿರೀನಿಸೇಧೋ ।
ಸಚ್ಚೇನ ದನ್ತೋ ದಮಸಾ ಉಪೇತೋ ।
ವೇದನ್ತಗೂ ವುಸಿತಬ್ರಹ್ಮಚರಿಯೋ ॥ [೩೦]

— ಸಂಯುತ್ತನಿಕಾಯ: ಬ್ರಾಹ್ಮಣಸಂಯುತ್ತ: ಅರಹಂತವಗ್ಗ: ಸುಂದರಿಕಸುತ್ತ.

೨. ಇಸ್ಸತ್ತಂ ಬಲವಿರಿಯಞ್ಚ
ಯಸ್ಮಿಂ ವಿಜ್ಜೇಥ ಮಾಣವೇ ।
ತಂ ಯುದ್ಧತ್ಥೇ ಭರೇ ರಾಜಾ
ನಾಸೂರಂ ಜಾತಿಪಚ್ಚಯಾ ॥ [೩೧]

೩. ತಥೇವ ಖನ್ತಿ ಸೋರಚ್ಚ
ಧಮ್ಮಾ ಯಸ್ಮಿಂ ಪತಿಟ್ಠಿತಾ ।
ತಂ ಅರಿಯವುತ್ತಿಂ ಮೇಧಾವೀ
ಹೀನಜಚ್ಚಮ್ಪಿ ಪೂಜಯೇ ॥ [೩೨]

— ಸಂಯುತ್ತನಿಕಾಯ: ಕೋಸಲಸಂಯುತ್ತ: ತತಿಯವಗ್ಗ: ಇಸ್ಸತ್ತಸುತ್ತ.

೪. ನ ಜಚ್ಚಾ ಬ್ರಾಹ್ಮಣೋ ಹೋತಿ
ನ ಜಚ್ಚಾ ಹೋತಿ ಅಬ್ರಾಹ್ಮಣೋ ।
ಕಮ್ಮನಾ ಬ್ರಾಹ್ಮಣೋ ಹೋತಿ
ಕಮ್ಮನಾ ಹೋತಿ ಅಬ್ರಾಹ್ಮಣೋ ॥ [೩೩]

— ಸುತ್ತನಿಪಾತ: ವಗ್ಗ ೩: ಸುತ್ತ ೯: ಗಾಥಾ ೫೭.

---

1. ಕೆಟ್ಟುವದಕ್ಕೆ ಹೋಗದಂತೆ ನಮ್ಮನ್ನು ತಡೆಯುವ ಲಜ್ಜೆಯೇ 'ಹ್ರೀ'. 2. ಬುದ್ಧನಿಗೆ 'ವೇದನೆ'ಯಾದ, ಎಂದರೆ ಬುದ್ಧನು ತಾನು ಅನುಭವಿಸಿ ತಿಳಿದ ಪರಮಜ್ಞಾನವೇ 'ವೇದ'. (ಇದು ಬ್ರಾಹ್ಮಣರ ವೇದವಲ್ಲ, ಬೌದ್ಧರದು). ಈ ವೇದದ ಅಂತವನ್ನು, ಎಂದರೆ ಬುದ್ಧನ ಪರಮಜ್ಞಾನದ ತುದಿಯು ಗುರಿಯಾದ ನಿರ್ವಾಣವನ್ನು, ತಿಳಿದವನು ('ವೇದನ್ತಗೂ') ವೇದಾಂತವನ್ನು ತಿಳಿದವನು.

## ೮. ಜಾತಿಯನ್ನು ಕೇಳಬೇಡ . . .

ಜಾತಿಯನ್ನು ಕೇಳಬೇಡ, ನಡತೆಯನ್ನು ಕೇಳು;
ಕಟ್ಟಿಗೆಯಿಂದ ಬೆಂಕಿ ಹುಟ್ಟುವುದಲ್ಲವೆ!
ನೀಚಕುಲದಲ್ಲಿ ಹುಟ್ಟಿದವನಾದರೂ ಧೃತಿವಂತನಾದ ಮುನಿಯು
ಲಜ್ಜೆ[1]ಯಿಂದ ತಡೆಯಲ್ಪಟ್ಟು, ಸತ್ಯದಿಂದ ದಾಂತನಾಗಿ,
ದಮೆಯಿಂದ ಕೂಡಿ, ವೇದಾಂತ[2]ವನ್ನು ತಿಳಿದು,
ಬ್ರಹ್ಮಚರ್ಯ[3]ವನ್ನು ಪೂರೈಸಿ, ಸದ್ವಂಶದಲ್ಲಿ ಹುಟ್ಟಿದವನಾಗುವನು [೩೦]

ಬಿಲ್ಲುಗಾರಿಕೆಯೂ ಬಲವೀರ್ಯಗಳೂ
ಯಾವ ಮನುಷ್ಯನಲ್ಲಿ ಕಾಣುವುವೋ
ಅವನನ್ನು ದೊರೆಯು ಯುದ್ಧಕ್ಕಾಗಿ ಪೋಷಿಸುವನು;
ಜಾತಿಯ ಕಾರಣದಿಂದ ಹೇಡಿಯನ್ನಲ್ಲ [೩೧]

ಅದರಂತೆಯೇ, ಕ್ಷಮೆ ನಮ್ರತೆ ಮೊದಲಾದ
ಗುಣಗಳು ಯಾರಲ್ಲಿ ಚೆನ್ನಾಗಿ ನಿಂತಿವೆಯೋ
ಆ ಆರ್ಯ[4]ವೃತ್ತಿಯುವವನನ್ನು ಮೇಧಾವಿಗಳು
ಅವನು ಹೀನಜಾತಿಯವನಾದರೂ ಪೂಜಿಸುವರು [೩೨]

ಜಾತಿಯಿಂದ ಬ್ರಾಹ್ಮಣ[5]ನಾಗುವುದಿಲ್ಲ
ಜಾತಿಯಿಂದ ಅಬ್ರಾಹ್ಮಣನಾಗುವುದಿಲ್ಲ
ಕರ್ಮ[6]ದಿಂದ ಬ್ರಾಹ್ಮಣನಾಗುವನು
ಕರ್ಮದಿಂದ ಅಬ್ರಾಹ್ಮಣನಾಗುವನು. [೩೩]

---

3. ಬ್ರಹ್ಮಚರ್ಯವೆಂದರೆ ಬ್ರಹ್ಮದ ಕಡೆಗೆ ಚರಣ; ಎಂದರೆ ಉತ್ಕೃಷ್ಟವಾದ ನಿರ್ವಾಣದ ಕಡೆಗೆ ನಡೆಯುವಿಕೆ.
4 ಅರ್ಹ, ಉತ್ತಮ. 5. ಬ್ರಾಹ್ಮಣ = ಶ್ರೇಷ್ಠನಾದವನು. ಅರ್ಹತನಿಗೆ 'ಬ್ರಾಹ್ಮಣ'ನೆಂಬುದು ಪ್ರತಿಶಬ್ದ. 6. ಕರ್ಮವೆಂದರೆ ಈಗ ಇಲ್ಲಿ ಮಾಡುವ ಕೆಲಸ. ಕರ್ಮಗಳು ಎರಡೇ ತೆರ: ಕುಶಲ, ಅಕುಶಲ; ಎಂದರೆ ಒಳ್ಳೆಯದು, ಕೆಟ್ಟದ್ದು.

## ೯. ಏಕಚರಿಯಂ

೧ ಅದ್ಧಾ ಪಸಂಸಾಮ ಸಹಾಯಸಮ್ಪದಂ ।
ಸೇಟ್ಠಾ ಸಮಾ ಸೇವಿತಬ್ಬಾ ಸಹಾಯಾ ।
ಏತೇ ಅಲದ್ಧಾ ಅನವಜ್ಜಭೋಜೀ ।
ಏಕೋ ಚರೇ ಖಗ್ಗವಿಸಾಣಕಪ್ಪೋ ॥ [೩೪]

೨. ದಿಸ್ವಾ ಸುವಣ್ಣಸ್ಸ ಪಭಸ್ಸರಾನಿ ।
ಕಮ್ಮಾರಪುತ್ತೇನ ಸುನಿಟ್ಠಿತಾನಿ ।
ಸಂಘಟ್ಟಮಾನಾನಿ ದುವೇ ಭುಜಸ್ಮಿಂ ।
ಏಕೋ ಚರೇ ಖಗ್ಗವಿಸಾಣಕಪ್ಪೋ ॥ [೩೫]

೩. ಸನ್ದಾಲಯಿತ್ವಾನ ಸಂಯೋಜನಾನಿ ।
ಜಾಲಂ ವ ಭೇತ್ವಾ ಸಲಿಲಮ್ಬುಚಾರೀ ।
ಅಗ್ಗೀವ ದಡ್ಢಂ ಅನಿವತ್ತಮಾನೋ ।
ಏಕೋ ಚರೇ ಖಗ್ಗವಿಸಾಣಕಪ್ಪೋ ॥ [೩೬]

— ಸುತ್ತನಿಪಾತ — ಗಾಥಾ ೪೭, ೪೮, ೬೨.

೪. ಯಥಾ ಬ್ರಹ್ಮಾ ತಥಾ ಏಕೋ ।
ಯಥಾ ದೇವೋ ತಥಾ ದುವೇ ।
ಯಥಾ ಗಾಮೋ ತಥಾ ತಯೋ ।
ಕೋಲಾಹಲಂ ತತುತ್ತರಿಂ ॥ [೩೭]

— ಥೇರಗಾಥಾ — ಗಾಥಾ ೨೪೫.

## ೯. ಒಂಟಿಯಾಗಿ ಹೋಗುವಿಕೆ

ಜೊತೆಗಾರರು ಹೆಚ್ಚಾಗಿರುವುದನ್ನು ನಿಜವಾಗಿ ಹೊಗಳುತ್ತೇನೆ.
ಉತ್ತಮರಾದ ಸಮರಾದ ಜೊತೆಗಾರರನ್ನು ಸೇವಿಸತಕ್ಕದು.
ಅವರು ಸಿಕ್ಕದಿದ್ದರೆ, ನಿಂದೆಗೆ ಒಳಗಾಗದೆ ಬದುಕುತ್ತ
ಖಡ್ಗಮೃಗದ ಕೊಂಬಿನ ಹಾಗೆ ಒಂಟಿಯಾಗಿ ಚರಿಸಲಿ. [೩೪]

ಅಕ್ಕಸಾಲೆಯು ಚೆನ್ನಾಗಿ ಮಾಡಿ,
ಭುಜದಲ್ಲಿ ಎರಡೂ ತಾಗಿ ಕುಟ್ಟುವ,
ಚಿನ್ನದ ತೊಳತೊಳಗವ ಆಭರಣ[1]ಗಳನ್ನು ಕಂಡು
ಖಡ್ಗಮೃಗದ ಕೊಂಬಿನ ಹಾಗೆ ಒಂಟಿಯಾಗಿ ಚರಿಸಲಿ. [೩೫]

ಕಟ್ಟುಗಳನ್ನು ಕಿತ್ತು ಮುರಿದು,
ನೀರಿನ ಮೀನಿನಂತೆ ಬಲೆಯನ್ನು ಒಡೆದು,
ಸುಟ್ಟಸ್ಥಳಕ್ಕೆ ಹಿಂದಿರುಗದ ಬೆಂಕಿಯಂತೆ,
ಖಡ್ಗಮೃಗದ ಕೊಂಬಿನ ಹಾಗೆ ಒಂಟಿಯಾಗಿ ಚರಿಸಲಿ. [೩೬]

ಒಬ್ಬನು ಇದ್ದರೆ ಬ್ರಹ್ಮ[2]ನ ಹಾಗೆ
ಇಬ್ಬರು ಆದರೆ ದೇವತೆಗಳ ಹಾಗೆ
ಮೂವರು ಆದರೆ ಗ್ರಾಮದ ಹಾಗೆ
ಆದಕ್ಕೆ ಮೀರಿದುದು ಬರಿಗಲಭೆ. [೩೭]

---

1. ಮೂಲದಲ್ಲಿ ‘ಆಭರಣ’ವೆಂಬ ಪದವಿಲ್ಲ. ಒಂದು ತೋಳಿನಲ್ಲಿ ಎರಡು ಆಭರಣವಿದ್ದರೆ ಹೇಗೆ ಒಂದಕ್ಕೊಂದು ತಾಗಿ ಸದ್ದಾಗುವುದೋ, ಹಾಗೆಯೇ ಇಬ್ಬರು ಒಂದು ಕಡೆ ಇದ್ದರೆ ಮಾತಿಗೆ ಮಾತು ಬಂದು ಜಗಳವಾಗುವುದು; ಅದರಿಂದ ಏಕಚರ್ಯೆ ಮೇಲು — ಎಂದು ಭಾವ. 2. ಬೌದ್ಧ ಗ್ರಂಥಗಳಲ್ಲಿ ‘ಬ್ರಹ್ಮ’ ಎಂಬುದು ಅನುತ್ತರ, ಅತ್ಯುತ್ತಮ, ಶ್ರೇಷ್ಠ ಎಂಬುದಕ್ಕೆ ಸಮಶಬ್ದ.

## ೧೦. ಕೋಧಂ

೧. ಯೋ ಉಪ್ಪತಿತಂ ವಿನೇತಿ ಕೋಧಂ
ವಿಸತಂ ಸಪ್ಪವಿಸಂ ವ ಓಸಧೇಹಿ।
ಸೋ ಭಿಕ್ಖು ಜಹಾತಿ ಓರಪಾರಂ
ಉರಗೋ ಜಿಣ್ಣಮಿವ ತಚಂ ಪುರಾಣಂ ॥ [೩೮]

— ಸುತ್ತನಿಪಾತ: ಗಾಥಾ ೧.

## ೧೧. ಪರಮಂ ಸುಖಂ

೧. ಅತ್ಥಮ್ಹಿ ಜಾತಮ್ಹಿ ಸುಖಾ ಸಹಾಯಾ।
ತುಟ್ಠೀ ಸುಖಾ ಯಾ ಇತರೀತರೇನ।
ಪುಞ್ಞಂ ಸುಖಂ ಜೀವಿತಸಙ್ಖಯಮ್ಹಿ।
ಸಬ್ಬಸ್ಸ ದುಕ್ಖಸ್ಸ ಸುಖಂ ಪಹಾನಂ ॥ [೩೯]

೨ ಸುಖಾ ಮತ್ತೇಯ್ಯತಾ ಲೋಕೇ।
ಅಥೋ ಪೇತ್ತೇಯ್ಯತಾ ಸುಖಾ।
ಸುಖಾ ಸಾಮಞ್ಞತಾ ಲೋಕೇ।
ಅಥೋ ಬ್ರಹ್ಮಞ್ಞತಾ ಸುಖಾ ॥ [೪೦]

೩. ಸುಖಂ ಯಾವಜರಾ ಸೀಲಂ।
ಸುಖಾ ಸದ್ಧಾ ಪತಿಟ್ಠಿತಾ।
ಸುಖೋ ಪಞ್ಞಾಯ ಪಟಿಲಾಭೋ।
ಪಾಪಾನಂ ಅಕರಣಂ ಸುಖಂ ॥ [೪೧]

೪. ಆರೋಗ್ಯಪರಮಾ ಲಾಭಾ।
ಸಂತುಟ್ಠಿ ಪರಮಂ ಧನಂ।
ವಿಸ್ಸಾಸಪರಮಾ ಞಾತೀ।
ನಿಬ್ಬಾನಂ ಪರಮಂ ಸುಖಂ ॥ [೪೨]

— ಧಮ್ಮಪದ: ಗಾಥಾ ೩೩೧—೩೩೩, ೨೦೪.

## ೧೦. ಕ್ರೋಧ

ಹರಡಿದ ಹಾವಿನ ವಿಷವನ್ನು ಓಷಧಿಗಳು ಹೇಗೋ ಹಾಗೆ
ಎದ್ದು ಬೀಳುತ್ತಿರುವ ಕೋಪವನ್ನು ತಡೆದು ತೆಗೆಯುವವನು,
ಆ ಭಿಕ್ಷುವು, ಕೆಳಲೋಕ ಮೇಲುಲೋಕಗಳನ್ನು ತ್ಯಜಿಸುತ್ತಾನೆ —
ಹರಿದ ಹಳೆಯ ಚರ್ಮವನ್ನು ಹಾವು ಹೇಗೋ ಹಾಗೆ. [೩೮]

## ೧೧. ಪರಮಸುಖ

ಅಗತ್ಯ ಹುಟ್ಟಿದಾಗ ಜೊತೆಗಾರರು ಸುಖ;
ಅದು ಇದರಿಂದ ತೃಪ್ತಿಪಡುವುದು ಸುಖ;
ಜೀವಿತವು ಕೊನೆಯಾಗುವಾಗ ಪುಣ್ಯವು ಸುಖ;
ಎಲ್ಲಾ ದುಃಖಗಳನ್ನೂ ಬಿಡುವುದು ಸುಖ. [೩೯]

ಲೋಕದಲ್ಲಿ ತಾಯ್ತನವು ಸುಖ;
ಹಾಗೆಯೆ ತಂದೆಯಾಗಿರುವಿಕೆಯು ಸುಖ;
ಲೋಕದಲ್ಲಿ ಶ್ರಮಣ[1]ನಾಗಿರುವಿಕೆಯು ಸುಖ;
ಹಾಗೆಯೆ ಬ್ರಾಹ್ಮಣನಾಗಿರುವಿಕೆಯು ಸುಖ. [೪೦]

ಮುಪ್ಪಿನ ವರೆಗಿನ ಶೀಲವು ಸುಖ;
ಚೆನ್ನಾಗಿ ನೆಲಸಿದ ಶ್ರದ್ಧೆಯು ಸುಖ;
ಪ್ರಜ್ಞೆಯನ್ನು ಸಾಧಿಸಿ ಪಡೆಯುವುದು ಸುಖ;
ಪಾಪಗಳನ್ನು ಮಾಡದಿರುವುದು ಸುಖ. [೪೧]

ಆರೋಗ್ಯವು ಅತ್ಯುತ್ತಮವಾದ ಲಾಭ;
ಸಂಪೂರ್ಣವಾದ ತೃಪ್ತಿಯು ಅತ್ಯುತ್ತಮವಾದ ಧನ;
ವಿಶ್ವಾಸವು ಅತ್ಯುತ್ತಮವಾದ ಜ್ಞಾತಿ;
ನಿರ್ವಾಣವು ಅತ್ಯುತ್ತಮವಾದ ಸುಖ [೪೨]

1. ಶ್ರಮಣನೆಂದರೆ ಸಂನ್ಯಾಸಿ; ಅನೇಕ ವೇಳೆ ಬೌದ್ಧಸಂನ್ಯಾಸಿ.

## ೧೨. ಇಸಿಪ್ಪವೇದಿತಂ ಮಗ್ಗಂ

೧. ಉಟ್ಠಹಥ ನಿಸೀದಥ
ಕೋ ಅತ್ಥೋ ಸುಪಿತೇನ ವೋ ।
ಆತುರಾನಂ ಹಿ ಕಾ ನಿದ್ದಾ
ಸಲ್ಲವಿದ್ಧಾನ ರುಪ್ಪತಂ ॥ [೪೩]

— ಸುತ್ತನಿಪಾತ: ವಗ್ಗ ೨: ಸುತ್ತ ೧೦: ಗಾಥಾ ೧.

೨. ಪಥವ್ಯಾ ಏಕರಜ್ಜೇನ
ಸಗ್ಗಸ್ಸ ಗಮನೇನ ವಾ ।
ಸಬ್ಬಲೋಕಾಧಿಪಚ್ಚೇನ
ಸೋತಾಪತ್ತಿಫಲಂ ವರಂ ॥ [೪೪]

— ಧಮ್ಮಪದ: ಗಾಥಾ ೧೭೮.

೩. ವಾಚಾನುರಕ್ಖೀ ಮನಸಾ ಸುಸಂವುತೋ ।
ಕಾಯೇನ ಚ ಅಕುಸಲಂ ನ ಕಯಿರಾ ।
ಏತೇ ತಯೋ ಕಮ್ಮಪಥೇ ವಿಸೋಧಯೇ ।
ಆರಾಧಯೇ ಮಗ್ಗಮಿಸಿಪ್ಪವೇದಿತಂ ॥ [೪೫]

— ಧಮ್ಮಪದ: ಗಾಥಾ ೨೮೧.

೪ ಏತಮ್ಹಿ ತುಮ್ಹೇ ಪಟಿಪನ್ನಾ
ದುಕ್ಖಽಸ್ಸನ್ತಂ ಕರಿಸ್ಸಥ ।
ಅಕ್ಖಾತೋ ವೇ ಮಯಾ ಮಗ್ಗೋ
ಅಞ್ಞಾಯ ಸಲ್ಲಸನ್ಥನಂ ॥ [೪೬]

— ಧಮ್ಮಪದ: ಗಾಥಾ ೨೭೫.

## ೧೨. ಋಷಿ ತಿಳಿಸಿದ ಮಾರ್ಗ

ಎದ್ದೇಳಿರಿ! ಕುಳಿತುಕೊಳ್ಳಿರಿ!
ಮಲಗಿರುವುದರಿಂದ ನಿಮಗೇನು ಪ್ರಯೋಜನ?
ಬಾಣ[1] ತಗುಲಿ ನೋಯುವವನಿಗೆ,
ರೋಗಿಗೆ, ನಿದ್ದೆಯೆಲ್ಲಿ? [೪೩]

ಭೂಮಿಗೆಲ್ಲ ತಾನೊಬ್ಬನೆ ರಾಜನಾಗುವುದಕ್ಕಿಂತ,
ಸ್ವರ್ಗಕ್ಕೆ ಹೋಗುವುದಕ್ಕಿಂತ,
ಎಲ್ಲಾ ಲೋಕಗಳ ಒಡೆತನಕ್ಕಿಂತ
ಸ್ರೋತಾಪತ್ತಿ[2]ಯು ಫಲವು ಮೇಲು. [೪೪]

ಮಾತನ್ನು ಅನುಸರಿಸಿ ಕಾಪಾಡಿ, ಮನಸ್ಸನ್ನು ಚೆನ್ನಾಗಿ ಸಂಯಮಮಾಡಿ,
ದೇಹದಿಂದ ಕೆಟ್ಟದನ್ನು ಮಾಡದಿರಬೇಕು;
ಈ ಮೂರು ಕರ್ಮದ ದಾರಿಗಳನ್ನು ಶುದ್ಧಮಾಡಬೇಕು;
ಋಷಿಯು ಉಪದೇಶಮಾಡಿದ ಮಾರ್ಗವನ್ನು ಸಾಧಿಸಬೇಕು [೪೫]

ಇಲ್ಲಿ ನೀವು ನಡೆದು ಸೇರಿದರೆ
ದುಃಖವನ್ನು ಕೊನೆಗಾಣಿಸುವಿರಿ:
ಬಾಣ ತೆಗೆಯುವುದನ್ನು ಕಂಡುಕೊಂಡು
ನಾನು ಈ ಮಾರ್ಗವನ್ನು ತಿಳಿಸಿದೆನು. [೪೬]

---

1. ಬೌದ್ಧರ ಪ್ರಕಾರ ಶಲ್ಯಗಳು ಏಳು: ರಾಗ, ದ್ವೇಷ, ಮೋಹ, ಮಾನ, ದೃಷ್ಟಿ, ಶೋಕ, ಕಥಂಕಥಾ (ಸಂಶಯ ಸಂದೇಹಗಳು). 2. ಸ್ರೋತಾಪತ್ತಿ ಎಂದರೆ ಹೊಳೆಯನ್ನು ಸೇರುವುದು. ಹೊಳೆಯು ಸಂಸಾರಕ್ಕೆ ಸಂಕೇತ. ಸಂಸಾರವೆಂಬ ಹೊಳೆಯನ್ನು ದಾಟಿ ನಿರ್ವಾಣವೆಂಬ ಆಚೆಯ ದಡವನ್ನು ಮುಟ್ಟಬೇಕಾದರೆ, ಧರ್ಮವೆಂಬ ದೋಣಿಯನ್ನು ಹತ್ತಿ ಮೊದಲು ಹೊಳೆಯನ್ನು ಸೇರಬೇಕು. ಹೀಗೆ ಸಂಸಾರದ ಹೊಳೆಯನ್ನು ದಾಟುವ ಪ್ರಥಮ ಪ್ರಯತ್ನದ ಫಲವು ‘ಸ್ರೋತಾಪತ್ತಿ ಫಲ.’

೫. ಉಜುಕೋ ನಾಮ ಸೋ ಮಗ್ಗೋ
ಅಭಯಾ ನಾಮ ಸಾ ದಿಸಾ ।
ರಥೋ ಅಕುಜನೋ ನಾಮ
ಧಮ್ಮಚಕ್ಕೇಹಿ ಸಂಯುತೋ ॥ [೪೭]

೬. ಹಿರೀ ತಸ್ಸ ಅಪಾಲಮ್ಬೋ ।
ಸತ್ಯಸ್ಸ ಪರಿವಾರಣಂ ।
ಧಮ್ಮಾಹಂ ಸಾರಥಿಂ ಬ್ರೂಮಿ ।
ಸಮ್ಮಾದಿಟ್ಠಿ ಪುರೇ ಜವಂ ॥ [೪೮]

೭. ಯಸ್ಸ ಏತಾದಿಸಂ ಯಾನಂ
ಇತ್ಥಿಯಾ ಪುರಿಸಸ್ಸ ವಾ ।
ಸ ವೇ ಏತೇನ ಯಾನೇನ
ನಿಬ್ಬಾನಸ್ಸೇವ ಸನ್ತಿಕೇ ॥ [೪೯]

—ಸಂಯುತ್ತನಿಕಾಯ: ದೇವತಾಸಂಯುತ್ತ: ಆದಿಚ್ಚವಗ್ಗ: ಅಚ್ಛರಾಸುತ್ತ.

೮. ಅಯೋಘನ ಹತಸ್ಸೇವ ಜಲತೋ ಜಾತವೇದಸ್ಸ ।
ಅನುಪುಬ್ಬೂಪಸನ್ತಸ್ಸ ಯಥಾ ನ ಞಾಯತೇ ಗತಿ ।
ಏವಂ ಸಮ್ಮಾವಿಮುತ್ತಾನಂ ಕಾಮಬಂಧೋಘತಾರಿನಂ ।
ಪಞ್ಞಾಪೇತುಂ ಗತಿ ನತ್ಥಿ ಪತ್ತಾನಂ ಅಚಲಂ ಸುಖಂ ॥ [೫೦]

—ಉದಾನ: ವಗ್ಗ ೮: ಗಾಥಾ ೧೦.

ಆ ಮಾರ್ಗಕ್ಕೆ 'ನೇರವಾದುದು' ಎಂದು ಹೆಸರು;
'ಭಯವಿಲ್ಲದುದು' ಎಂದು ಆ ದಿಕ್ಕಿಗೆ ಹೆಸರು;
ಧರ್ಮಚಕ್ರಗಳಿಂದ ಕೂಡಿದ ಆ ರಥಕ್ಕೆ
'ವಕ್ರವಾಗಿ ಹೋಗದುದು' ಎಂದು ಹೆಸರು. [೪೭]

ಲಜ್ಜೆಯು ಅದರ ಅಪಾಲಂಬ[1];
ಸತ್ಯವು ಅದರ ಪರಿವಾರಣ[2];
ಧರ್ಮವು ಅದರ ಸಾರಥಿಯೆಂದು ನಾನು ಹೇಳುತ್ತೇನೆ.
ಸಮ್ಯಗ್ದೃಷ್ಟಿ[3]ಯು ಮುಂದೆ ಓಡುವವರು[4]. [೪೮]

ಹೆಂಗಸಾಗಲಿ ಗಂಡಸಾಗಲಿ —
ಯಾರಿಗೆ ಈ ರೀತಿಯ ಯಾನವುಂಟು,
ಅವರು ಈ ಯಾನದಿಂದ
ನಿರ್ವಾಣಕ್ಕೆ ಸಮೀಪರಾಗುವರು. [೪೯]

ಸುತ್ತಿಗೆಯ ಏಟನಿಂದ ಹುಟ್ಟಿ, ಕ್ರಮಕ್ರಮವಾಗಿ ತಣ್ಣಗಾಗುವ
ಉರಿಯುವ ಬೆಂಕಿಯ ಗತಿ ಹೇಗೆ ತಿಳಿಯುವುದಿಲ್ಲವೋ
ಹಾಗೆಯೆ ಸಂಪೂರ್ಣ ವಿಮುಕ್ತಿ[5]ಯನ್ನು ಪಡೆದು
ಕಾಮಬಂಧಗಳ ಪ್ರವಾಹವನ್ನು ದಾಟಿ
ಅಚಲವಾದ ಸುಖ[6]ವನ್ನು ಪಡೆದವರ ಗತಿಯನ್ನು
ತಿಳಿಸುವುದಕ್ಕೆ ಸಾಧ್ಯವಿಲ್ಲ. [೫೦]

---

1. ರಥವನ್ನು ತಡೆಯಬಲ್ಲ ರಥಾಂಗವಿಶೇಷ; ಬ್ರೇಕು (Brake). 2. ರಥದಲ್ಲಿ ಕುಳಿತವರು ಕೆಳಗೆ ಬೀಳದಂತೆ ರಥಪಂಜರದ ಸುತ್ತ ಮಾಡಿರುವ ರಕ್ಷಣೆ. 3. ನಿರ್ವಾಣಕ್ಕೆ ಸಾಧನವಾದ ಅಷ್ಟಾಂಗಿಕ ಮಾರ್ಗದಲ್ಲಿ ಇದು ಮೊದಲನೆಯ ಅಂಗ; ನಾಲ್ಕು ಆರ್ಯ ಸತ್ಯಗಳಲ್ಲಿ ನಂಬುಗೆಯಿಡುವುದು ಸಮ್ಯಗ್ದೃಷ್ಟಿ. 4. ರಥ ಬರುವ ದಾರಿಯಲ್ಲಿ ಇರಬಹುದಾದ ಏರುತಗ್ಗುಗಳನ್ನೂ ಇತರ ಅಡ್ಡಿಗಳನ್ನೂ ತೆಗೆದುಹಾಕಲು ಮುಂದೆ ಕೆಲವರು ಓಡುವುದು ಪದ್ಧತಿ. 5, 6. ಇವು ಎರಡೂ ನಿರ್ವಾಣಕ್ಕೆ ಹೆಸರು.

## ೧೩. ಪಬ್ಬಜ್ಜಾ ಸುತ್ತಂ

೧. ಪಬ್ಬಜ್ಜಂ ಕಿತಯಿಸ್ಸಾಮಿ
ಯಥಾ ಪಬ್ಬಜಿ ಚಕ್ಖುಮಾ ।
ಯಥಾ ವಿಮಂಸಮಾನೋ ಸೋ
ಪಬ್ಬಜ್ಜಂ ಸಮರೋಚಯಿ ॥ [೫೧]

೨. ಸಮ್ಬಾಧೋಽಯಂ ಘರಾವಾಸೋ
ರಜಸ್ಸಾಽಯತನಂ ಇತಿ ।
ಅಬ್ಭೋಕಾಸೋ ಚ ಪಬ್ಬಜ್ಜಾ
ಇತಿ ದಿಸ್ವಾನ ಪಬ್ಬಜಿ ॥ [೫೨]

೩. ಪಬ್ಬಜಿತ್ವಾನ ಕಾಯೇನ
ಪಾಪಕಮ್ಮಂ ವಿವಜ್ಜಯಿ ।
ವಾಚೀದುಚ್ಚರಿತಂ ಹಿತ್ವಾ
ಆಜೀವಂ ಪರಿಸೋಧಯಿ ॥ [೫೩]

೪. ಅಗಮಾ ರಾಜಗಹಂ ಬುದ್ಧೋ
ಮಗಧಾನಂ ಗಿರಿಬ್ಬಜಂ ।
ಪಿಣ್ಡಾಯ ಅಭಿಹಾರೇಸಿ
ಆಕಿಣ್ಣವರಲಕ್ಖಣೋ ॥ [೫೪]

೫. ತಮದ್ದಸಾ ಬಿಮ್ಬಿಸಾರೋ
ಪಾಸಾದಸ್ಮಿಂ ಪತಿಟ್ಠಿತೋ ।
ದಿಸ್ವಾ ಲಕ್ಖಣಸಮ್ಪನ್ನಂ
ಇಮಮತ್ಥಂ ಅಭಾಸಥ ॥ [೫೫]

## ೧೩. ಪ್ರವ್ರಜ್ಯಾ ಸೂತ್ರ

ಚಕ್ಷುಮಂತ[1] ತಾ ಪರಿವ್ರಜಿಸಿದುದನು,
ಮನದಲಿ ಬಲು ತಿರುವಿ
ಆದೆ ಪ್ರವ್ರಜ್ಯವನೆಂತು ಮೆಚ್ಚಿದನೊ,
ಕೀರ್ತಿಸುವೆನು ನಾನು. [೫೧]

“ಮನೆಯು ವಾಸವಿದು ಬಾಧಾಕರವು,
ಕೊಳೆ[2]ಗಳಿಗಿದೆ ತಾಣ;
ಪರಿವ್ರಜಿಸಿದರದರಲಿ ಪುನರುದಯಕೆ
ಇಲ್ಲವು ಅವಕಾಶ” — [೫೨]

ಎಂದು ಕಂಡು, ಪರಿವ್ರಜಿಸುತ, ಬಿಟ್ಟು
ಪಾಪಕರ್ಮಗಳನು,
ಮಾತಿನ ದುಶ್ಚರಿತಗಳನು ತೊಲಗಿಸಿ,
ಬದುಕನು ಶೋಧಿಸಿದ. [೫೩]

ರಾಜಗೃಹಕೆ ತಾ ಬಂದನು ಬುದ್ಧನು;
ಮಗಧದ ಗಿರಿವ್ರಜವ
ಭಿಕ್ಷೆಗೋಸುಗ ಹೊಕ್ಕು, ನಡೆದನು
ವರಲಕ್ಷಣ[3]ಯುತನು. [೫೪]

ಬಿಂಬಿಸಾರನವ ಪ್ರಾಸಾದದಲಿ
ನಿಂತು ಕಂಡನವನ;
ನೋಡುತ ಲಕ್ಷಣಸಂಪನ್ನನನು
ನುಡಿದನಿಂತು ತಾನು: [೫೫]

---

1. ಎಲ್ಲವನ್ನೂ ಕಾಣಬಲ್ಲ ಸಮಂತಚಕ್ಷುವೆನಿಸಿದ ಬುದ್ಧ. 2. ರಾಗ, ದ್ವೇಷ, ಮೋಹ.
3. ಮೂವತ್ತೆರಡು ಮಹಾಪುರುಷಲಕ್ಷಣಗಳು.

೬. ಇಮಂ ಭೋನ್ತೋ ನಿಸಾಮೇಥ
ಅಭಿರೂಪೋ ಬ್ರಹಾ ಸುಚಿ ।
ಚರಣೇನ ಚೇವ ಸಮ್ಪನ್ನೋ
ಯುಗಮತ್ತಞ್ಚ ಪೇಕ್ಖತಿ ॥ [೫೬]

೭. ಓಕ್ಖಿತ್ತಚಕ್ಖು ಸತಿಮಾ
ನಾಯಂ ನೀಚಕುಲಾಮಿವ ।
ರಾಜದೂತಾ ವಿಧಾವನ್ತು
ಕುಹಿಂ ಭಿಕ್ಖು ಗಮಿಸ್ಸತಿ ॥ [೫೭]

೮. ತೇ ಪೇಸಿತಾ ರಾಜದೂತಾ
ಪಿಟ್ಠಿತೋ ಅನುಬನ್ಧಿಸುಂ ।
ಕುಹಿಂ ಗಮಿಸ್ಸತಿ ಭಿಕ್ಖು
ಕತ್ಥ ವಾಸೋ ಭವಿಸ್ಸತಿ ॥ [೫೮]

೯. ಸಪದಾನಞ್ಚರಮಾನೋ
ಗುತ್ತದ್ವಾರೋ ಸುಸಂವುತೋ ।
ಖಿಪ್ಪಂ ಪತ್ತಂ ಅಪೂರೇಸಿ
ಸಮ್ಪಜಾನೋ ಪಟಿಸ್ಸತೋ ॥ [೫೯]

೧೦. ಸ ಪಿಣ್ಡಚಾರಂ ಚರಿತ್ವಾ
ನಿಕ್ಖಮ್ಮ ನಗರಾ ಮುನಿ ।
ಪಣ್ಡವಂ ಅಭಿಹಾರೇಸಿ
ಎತ್ಥ ವಾಸೋ ಭವಿಸ್ಸತಿ ॥ [೬೦]

"ನೋಡಿ, ನೋಡಿರಿವನಭಿರೂಪನು, ಬೃಹ-
ದಾಕಾರನು, ಶುಚಿಯು;
ಸಂಪನ್ನನು ಸಚ್ಚರಣನದಿನಿವನದು
ನೋಟವು ಯುಗ ಮಾತ್ರ. [೪೬]

"ದೃಷ್ಟಿ ಕೆಳಗೆ, ಸ್ಮೃತಿಮಂತನಿವನು, ತಾ
ನೀಚಕುಲಜನಲ್ಲ;
ದೂತರು ಧಾವಿಸಿಹೋಗಲಿ; ಎಲ್ಲಿಗೆ
ಹೋಗುವನೀ ಭಿಕ್ಷು?" [೪೭]

ದೊರೆಯು ಕಳುಹಿದನು; ಹಿಂಬಾಲಿಸಿದರು
ರಾಜದೂತರಾಗ;
"ಎಲ್ಲಿ ಹೋಗುವನು? ಭಿಕ್ಷುವೀತನಿಗೆ
ಇರುವುದೆಲ್ಲಿ ವಾಸ?" [೪೮]

ಗುಪ್ತದ್ವಾರ[1]ನವ ಸಂವೃತನಾಗಿ
ಭಿಕ್ಷೆಗಾಗಿ ತಿರುಗಿ,
ಪ್ರಜ್ಞೆ ಸ್ಮೃತಿಗಳನು ಧರಿಸಿ, ಬೇಗನೆ
ಪಾತ್ರೆ ತುಂಬಿಸಿದನು. [೪೯]

ಭಿಕ್ಷಾಟನೆಯನು ಚರಿಸಿ ಮುನಿಯು ತಾ
ಬಿಟ್ಟನು ನಗರವನು;
ಪಂಡವ[2]ವಿರುವೆಡೆ ನಡೆದು ಸೇರಿದನು;
"ವಾಸವಿವನಿಗಿಲ್ಲಿ." [೫೦]

1. ಇಂದ್ರಿಯಗಳೆಂಬ ದ್ವಾರಗಳು. 2. ರಾಜಗೃಹದ ಸುತ್ತಿನ ಐದು ಗಿರಿಗಳಲ್ಲಿ ಒಂದು.

೧೧. ದಿಸ್ವಾನ ವಾಸೂಪಗತಂ
ತತೋ ದೂತಾ ಉಪಾವಿಸುಂ ।
ಏಕೋ ಚ ದೂತೋ ಆಗನ್ತ್ವಾ
ರಾಜಿನೋ ಪಟಿವೇದಯಿ ॥ [೬೧]

೧೨. ಏಸ ಭಿಕ್ಖು ಮಹಾರಾಜ
ಪಣ್ಡವಸ್ಸ ಪುರತ್ಥತೋ ।
ನಿಸಿನ್ನೋ ವ್ಯಗ್ಘುಸಭೋ ವ
ಸೀಹೋ ವ ಗಿರಿಗಬ್ಭರೇ ॥ [೬೨]

೧೩. ಸುತ್ವಾನ ದೂತವಚನಂ
ಭದ್ದಯಾನೇನ ಖತ್ತಿಯೋ ।
ತರಮಾನರೂಪೋ ನಿಯ್ಯಾಸಿ
ಯೇನ ಪಣ್ಡವಪಬ್ಬತೋ ॥ [೬೩]

೧೪. ಸ ಯಾನಭೂಮಿಂ ಯಾಯಿತ್ವಾ
ಯಾನಾ ಓರುಯ್ಹ ಖತ್ತಿಯೋ ।
ಪತ್ತಿಕೋ ಉಪಸಂಕಮ್ಮ
ಆಸಜ್ಜ ನಂ ಉಪಾವಿಸಿ ॥ [೬೪]

೧೫. ನಿಸಜ್ಜ ರಾಜಾ ಸಮ್ಮೋದಿ
ಕಥಂ ಸಾರಾಣಿಯಂ ತತೋ ।
ಕಥಂ ಸೋ ವೀತಿಸಾರೇತ್ವಾ
ಇಮಮತ್ಥಂ ಅಭಾಸಥ ॥ [೬೫]

ದೂತರು, ವಾಸವನಾತನು ಹೊಕ್ಕುದ
ಕಂಡು ಕುಳಿತರಲ್ಲಿ;
ಒಬ್ಬ ದೂತ ತಾನಿಂತು ತಿಳಿಸಿದನು
ದೊರೆಯು ಬಳಿಗೆ ಬಂದು: [೬೧]

“ಭಿಕ್ಷುವವನು ತಾ, ಭೋ ಮಹಾರಾಜ,
ವ್ಯಾಘ್ರ ವೃಷಭದಂತೆ
ಗಿರಿಗುಹೆ ಸಿಂಹದೊಲಿರುವನು ಪಂಡವ
ಗಿರಿಯ ಪೂರ್ವದಲ್ಲಿ.” [೬೨]

ದೂತ ವಚನವನು ಕೇಳಿ ಕ್ಷತ್ರಿಯನು
ಭದ್ರಯಾನವೇರಿ
ಪಂಡವ ಪರ್ವತವಿರುವೆಡೆ ಹೋದನು
ತ್ವರಿತಗಮನದಿಂದ. [೬೩]

ಯಾನ ನಡೆವನಕ ಹೋಗಿ ಯಾನದಿಂ-
ದಿಳಿದನು ಕ್ಷತ್ರಿಯನು;
ಪಾದಚಾರಿ ತಾನೈದಿ ಬಳಿಗೆ ಬಂ-
ದಲ್ಲಿ ಕುಳಿತನಾಗ. [೬೪]

ಕುಳಿತು ಕೇಳಿದನು ಕುಶಲಪ್ರಶ್ನೆಗಳ
ದೊರೆಯು ಮೋದದಿಂದ;
ತನ್ನನವನು ಪ್ರತಿನುಡಿಸಲಾಗ ತಾ
ನುಡಿದನವನಿಗಿಂತು: [೬೫]

೧೬. ಯುವಾ ಚ ದಹರೋ ಚಾಸಿ
ಪಠಮುಪ್ಪತ್ತಿಕೋ ಸುಸು ।
ವಣ್ಣಾರೋಹೇನ ಸಮ್ಪನ್ನೋ
ಜಾತಿಮಾ ವಿಯ ಖತ್ತಿಯೋ ॥ [೬೬]

೧೭. ಸೋಭಯನ್ತೋ ಅನೀಕಗ್ಗಂ
ನಾಗಸಂಘಪುರಕ್ಖತೋ ।
ದದಾಮಿ ಭೋಗೇ ಭುಞ್ಜಸ್ಸು
ಜಾತಿಞ್ಚಕ್ಖಾಹಿ ಪುಚ್ಛಿತೋ ॥ [೬೭]

೧೮. ಉಜೂ ಜನಪದೋ ರಾಜ
ಹಿಮವನ್ತಸ್ಸ ಪಸ್ಸತೋ ।
ಧನವಿರಿಯೇನ ಸಮ್ಪನ್ನೋ
ಕೋಸಲೇಸು ನಿಕೇತಿನೋ ॥ [೬೮]

೧೯. ಆದಿಚ್ಚಾ ನಾಮ ಗೋತ್ತೇನ
ಸಾಕಿಯಾ ನಾಮ ಜಾತಿಯಾ ।
ತಮ್ಹಾ ಕುಲಾ ಪಬ್ಬಜಿತೋ ರಾಜ
ನ ಕಾಮೇ ಅಭಿಪತ್ಥಯಂ ॥ [೬೯]

೨೦. ಕಾಮೇಸ್ವಾದೀನವಂ ದಿಸ್ವಾ
ನೇಕ್ಖಮ್ಮಂ ದಟ್ಠು ಖೇಮತೋ ।
ಪಧಾನಾಯ ಗಮಿಸ್ಸಾಮಿ
ಏತ್ಥ ಮೇ ರಞ್ಜತಿ ಮನೋ ॥ [೭೦]

— ಸುತ್ತನಿಪಾತ — ಮಹಾವಗ್ಗ — ಪಬ್ಬಜ್ಜಾ ಸುತ್ತ.

"ಯುವಕನು ನೀನು, ಚಿಕ್ಕವನಿನ್ನೂ,
ಎಳೆವರೆಯದ ಶಿಶುವು;
ವರ್ಣಾರೋಹದ ಸಂಪತ್ತಿದೆ, ನೀ
ಶೋಭಿಸುತಿಹೆಯಿಂತು: [೧೬]

"ಆನೆ ಸುತ್ತಲಿರೆ ಸೇನೆಯ ಮುಂದಿನ
ಕ್ಷಾತ್ರ ಕುಲಜನಂತೆ!
ಭೋಗ ಕೊಡುವೆನದ ಭುಂಜಿಸು; ಹೇಳು,
ನಿನ್ನ ಜಾತಿಯೇನು?" [೧೭]

"ರಾಜಾ! ಹಿಮವತ್ಪರ್ವತ ಪಾರ್ಶ್ವದಿ
ಕೋಸಲದವರಿಹರು;
ಧನ ವೀರ್ಯಗಳಿಂದಧಿಕಯುತರು, ಮೇಣ್
ಋಜು ಜನಪದದವರು. [೧೮]

"ಆದಿತ್ಯನದು ಗೋತ್ರುವವರದು,
ಶಾಕ್ಯರು ಜಾತಿಯಲಿ;
ಕಾಮವ ಬಯಸದೆ ತತ್ಕುಲದಿಂದಾಂ
ಪರಿವ್ರಜಿಸಿದೆ, ರಾಜ! [೧೯]

"ಕಂಡು ಕ್ಷೇಮವ ನಿಷ್ಕ್ರಮಣದಲಿ
ದುಃಖ ಕಾಮಗಳಲಿ,
ಹೊರಟಿರುವೆನು ನಾ ಸಾಧಿಸಲ[1]ದರೊಳೆ
ರಂಜಿಸುವುದು ಮನಸು." [೨೦]

---

1. ನಿಷ್ಕ್ರಮಣದ ಗುರಿಯಾದ ನಿರ್ವಾಣವನ್ನು ಸಾಧಿಸಲು.

## ೧೪. ಆಳವಕ ಸುತ್ತ

೧. ಕಿಂ ಸೂಽಧ ವಿತ್ತಂ ಪುರಿಸಸ್ಸ ಸೇಟ್ಠಂ ।
ಕಿಂ ಸು ಸುಚಿಣ್ಣಂ ಸುಖಮಾವಹಾತಿ ।
ಕಿಂ ಸು ಹವೇ ಸಾದುತರಂ ರಸಾನಂ ।
ಕಥಂಜೀವಿಂ ಜೀವಿತಂ ಆಹು ಸೇಟ್ಠಂ ॥ [೭೧]

೨. ಸದ್ಧೀಽಧ ವಿತ್ತಂ ಪುರಿಸಸ್ಸ ಸೇಟ್ಠಂ ।
ಧಮ್ಮೋ ಸುಚಿಣ್ಣೋ ಸುಖಮಾವಹಾತಿ ।
ಸಚ್ಚಂ ಹವೇ ಸಾದುತರಂ ರಸಾನಂ ।
ಪಞ್ಞಾಜೀವಂ ಜೀವಿತಂ ಆಹು ಸೇಟ್ಠಂ ॥ [೭೨]

೩. ಕಥಂ ಸು ತರತೀ ಓಘಂ
ಕಥಂ ಸು ತರತಿ ಅಣ್ಣವಂ ।
ಕಥಂ ಸು ದುಕ್ಖಂ ಅಚ್ಚೇತಿ
ಕಥಂ ಸು ಪರಿಸುಜ್ಝತಿ ॥ [೭೩]

೪. ಸದ್ಧಾಯ ತರತೀ ಓಘಂ
ಅಪ್ಪಮಾದೇನ ಅಣ್ಣವಂ ।
ವಿರಿಯೇನ ದುಕ್ಖಂ ಅಚ್ಚೇತಿ
ಪಞ್ಞಾಯ ಪರಿಸುಜ್ಝತಿ ॥ [೭೪]

೫. ಕಥಂ ಸು ಲಭತೇ ಪಞ್ಞಂ
ಕಥಂ ಸು ವಿನ್ದತೇ ಧನಂ ।
ಕಥಂ ಸು ಕಿತ್ತಿಂ ಪಪ್ಪೋತಿ
ಕಥಂ ಮಿತ್ತಾನಿ ಗನ್ಥತಿ ।
ಅಸ್ಮಾ ಲೋಕಾ ಪರಂಲೋಕಂ
ಕಥಂ ಪೇಚ್ಚ ನ ಸೋಚತಿ ॥ [೭೫]

## ೧೪. ಆಳವಕ ಸೂತ್ರ

"ಇಲ್ಲಿ ಪುರುಷನಿಗಾವ ಧನವು ಮೇಲು?
"ಸುಖ ಬರುವುದಾವುದನು ಸುಚರಿಸಿದರೆ?
"ರಸಗಳೊಳಗಾವುದ್ಕೆ ಹೆಚ್ಚು ರುಚಿಯು?
"ಜೀವಿತವನೆಂತಹುದ ಮೇಲೆಂಬರು?" [೭೧]

"ಶ್ರದ್ಧೆ ಪುರುಷನಿಗಿಲ್ಲಿ ಶ್ರೇಷ್ಠಧನವು;
"ಸುಖ ಬಹುದು ಧರ್ಮವನು ಸುಚರಿಸಿದರೆ;
"ರಸಗಳೊಳು ಸತ್ಯವೇ ಹೆಚ್ಚು ರುಚಿಯು;
"ಪ್ರಜ್ಞೆಯಿಂ ಜೀವಿಸಿದ ಬದುಕೆ ಮೇಲು." [೭೨]

"ಹೊಳೆಯು ದಾಟುವುದೆಂತು?
ದಾಟಲೆಂತರ್ಣವವನು?
ದುಃಖ ಕಳೆವುದು ಹೇಗೆ?
ಪರಿಶುದ್ಧನಪ್ಪುದೆಂತು?" [೭೩]

"ಶ್ರದ್ಧೆಯಿಂದಲಿ ಹೊಳೆಯು-
ನಪ್ರಮಾದದಿ ಕಡಲ ದಾಟಲಕ್ಕು;
ದುಃಖ ಕಳೆಯಲು ವೀರ್ಯ;
ಪ್ರಜ್ಞೆಯಿಂ ಪರಿಶುದ್ಧನಾಗಲಕ್ಕು" [೭೪]

"ಪ್ರಜ್ಞೆ ಲಭಿಸುವುದೆಂತು?
ಧನ ಪಡೆವುದೆಂತು?
ಕೀರ್ತಿ ದೊರಕುವುದೆಂತು?
ಮಿತ್ರರನು ಪಡೆವುದೆಂತು?
ಲೋಕವಿದರಿಂದದಕೆ
ಹೋಗಿ ಶೋಕಿಸದಿರುವುದೆಂತು?" [೭೫]

೬. ಸದ್ದಹಾನೋ ಅರಹತಂ
ಧಮ್ಮಂ ನಿಬ್ಬಾನಪತ್ತಿಯಾ ।
ಸುಸ್ಸೂಸಾ ಲಭತೇ ಪಞ್ಞಂ
ಅಪ್ಪಮತ್ತೋ ವಿಚಕ್ಖಣೋ ॥ [೭೬]

೭. ಪತಿರೂಪಕಾರೀ ಧುರವಾ
ಉಟ್ಠಾತಾ ವಿನ್ದತೇ ಧನಂ ।
ಸಚ್ಚೇನ ಕಿತ್ತಿಂ ಪಪ್ಪೋತಿ
ದದಂ ಮಿತ್ತಾನಿ ಗನ್ಥತಿ ॥ [೭೭]

೮. ಯಸ್ಸೇತೇ ಚತುರೋ ಧಮ್ಮಾ
ಸದ್ಧಸ್ಸ ಘರಮೇಸಿನೋ ।
ಸಚ್ಚಂ ಧಮ್ಮೋ ಧಿತಿ ಚಾಗೋ
ಸ ವೇ ಪೇಚ್ಚ ನ ಸೋಚತಿ ॥ [೭೮]

೯. ಇಂಘ ಅಞ್ಞೇ ಪಿ ಪುಚ್ಛಸ್ಸು
ಪುಥೂ ಸಮಣಬ್ರಾಹ್ಮಣೇ ।
ಯದಿ ಸಚ್ಚಾ ದಮಾ ಚಾಗಾ
ಖನ್ತ್ಯಾ ಭಿಯ್ಯೋಧ ವಿಜ್ಜತಿ ॥ [೭೯]

೧೦. ಕಥಂ ನು ದಾನಿ ಪುಚ್ಛೇಯ್ಯಂ
ಪುಥೂ ಸಮಣಬ್ರಾಹ್ಮಣೇ ।
ಸೋಹಂ ಅಜ್ಜ ಪಜಾನಾಮಿ
ಯೋ ಅತ್ಥೋ ಸಮ್ಪರಾಯಿಕೋ ॥ [೮೦]

"ನಿರ್ವಾಣ ದೊರಕಿಸುವ ಅರ್ಹತರ ಧರ್ಮದಲಿ
ಶ್ರದ್ಧೆಯಿಂದಲಿ ನಡೆದು, ಆ ಅರ್ಹತರನು
ಅಪ್ರಮತ್ತತೆಯಿಂದ ತಾ ವಿಚಕ್ಷಣೆಯಿಂದ
ಶುಶ್ರೂಷೆಗೈದವಗೆ ಲಭಿಸುವುದು ಪ್ರಜ್ಞೆ. [೭೬]

"ತಕ್ಕುದನು ಗೈಯುವವನೆಚ್ಚತ್ತು ನಡೆಯುವವ-
ನಾ ಧುರಂಧರನವನು ಧನ ಪಡೆವನು;
ದೊರಕುವುದು ಕೀರ್ತಿ ತಾ ಸತ್ಯದಿಂದೆ;
ಮಿತ್ರರನು ಪಡೆಯುವುದು ದಾನದಿಂದೆ. [೭೭]

"ಸತ್ಯ ಧರ್ಮ ಧೃತಿ ತ್ಯಾಗವೆಂಬೀ ನಾಲ್ಕು
ಧರ್ಮಗಳ ಶ್ರದ್ಧೆಯಿಂದಾಚರಿಸುವ
ಗೃಹವಾಸಿ ಸತ್ತು ತಾ ಶೋಕಪಡನು;
ಸತ್ತು ಶೋಕಿಸದಿರುವನವನೆ ಅವನೆ. [೭೮]

"ಇನ್ನು ಇತರರ ಕೇಳು,
ಬೇರೆ ಬೇರೆಯ ಶ್ರಮಣ ಬ್ರಾಹ್ಮಣರ ಕೇಳು, ಹೋಗು:
'ಸತ್ಯ ದಯೆ ತ್ಯಾಗ ಕ್ಷಮೆ-
ಗಳಿಗಿಂತ ಮೇಲಾದುದಿನ್ನಿಹುದೆ ಲೋಕದಲ್ಲಿ?'" [೭೯]

"ಇನ್ನು ಇತರರ ನಾನು ಕೇಳಲೇಕೆ
ಬೇರೆಬೇರೆಯ ಶ್ರಮಣ ಬ್ರಾಹ್ಮಣರನು?
ಸತ್ತಬಳಿಕೆನಗೇನು ಮೇಲೆಂಬುದ
ಚೆನ್ನಾಗಿ ತಿಳಿದಿರುವೆನಿಂದು ನಾನು. [೮೦]

೧೧. ಅತ್ಥಾಯ ವತ ಮೇ ಬುದ್ಧೋ
ವಾಸಾಯಾಽಳವಿಮಾಗಮಾ ।
ಸೋಽಹಂ ಅಜ್ಜ ಪಜಾನಾಮಿ
ಯತ್ಥ ದಿನ್ನಂ ಮಹಪ್ಫಲಂ ॥ [೮೧]

೧೨. ಸೋಽಹಂ ವಿಚರಿಸ್ಸಾಮಿ
ಗಾಮಾ ಗಾಮಂ ಪುರಾ ಪುರಂ ।
ನಮಸ್ಸಮಾನೋ ಸಂಬುದ್ಧಂ
ಧಮ್ಮಸ್ಸ ಚ ಸುಧಮ್ಮತಂ ॥ [೮೨]

—ಸುತ್ತನಿಪಾತ — ವಗ್ಗ ೧ — ಸುತ್ತ ೧೦.

## ೧೫. ಸುನೀತೋ ಥೇರೋ

೧. ನೀಚೇ ಕುಲಮ್ಹಿ ಜಾತೋಽಹಂ
ದಳಿದ್ದೋ ಅಪ್ಪಭೋಜನೋ ।
ಹೀನಂ ಕಮ್ಮಂ ಮಮಂ ಆಸಿ
ಅಹೋಸಿಂ ಪುಪ್ಫಛಡ್ಡಕೋ ॥ [೮೩]

೨. ಜಿಗುಚ್ಛಿತೋ ಮನುಸ್ಸಾನಂ
ಪರಿಭೂತೋ ಚ ವಮ್ಭಿತೋ ।
ನೀಚಂ ಮನಂ ಕರಿತ್ವಾನ
ವನ್ದಿಸ್ಸಂ ಬಹುಕಂ ಜನಂ ॥ [೮೪]

೩. ಅಥಽದ್ದಸಾಸಿಂ ಸಮ್ಬುದ್ಧಂ
ಭಿಕ್ಖುಸಂಘಪುರಕ್ಖತಂ ।
ಪವಿಸನ್ತಂ ಮಹಾವೀರಂ
ಮಗಧಾನಂ ಪುರುತ್ತಮಂ ॥ [೮೫]

“ಮೇಲು ನನಗಾಗಲೆಂದಾಳವಿಗೆ ಬಂದು ನೆಲ-
ಸಿದನ್ನೈಸೆ ಬುದ್ಧ!
ದಾನವಾವುದು ಹಿರಿಯ ಫಲ ಕೊಡುವುದೆಂಬುದನು
ನಾನರಿತೆನಿಂದು! [೮೧]

“ಗ್ರಾಮದಿಂ ಗ್ರಾಮಕ್ಕೆ
ಪುರದಿಂದ ಪುರಕಾನು ವಿಚರಿಸುವೆನು;
ಸಂಬುದ್ಧನನು ಮೇಣು
ಧರ್ಮದೌತ್ಕೃಷ್ಟ್ಯವನು ಕೀರ್ತಿಸುವೆನು.” [೮೨]

## ೧೫. ಸ್ಥವಿರ[1] ಸುನೀತ

ನೀಚ ಕುಲದಲಿ ಜನನ,
ನಾನಲ್ಪಭೋಜನನು, ನಾ ದರಿದ್ರ;
ಹೂಗಳನು[2] ಗುಡಿಸುವುದು —
ಅದುವೆ ಆಗಿತ್ತೆನ್ನ ಹೀನಕರ್ಮ. [೮೩]

ಹೀನೈಸಿ ಪರಿಭವಿಸಿ
ಜರಿದು ಪೋಗುವರೆನ್ನ ಕಂಡ ಜನರು;
ಎನ್ನ ಮನ ಕಿರಿದಪ್ಪು-
ದಾನು ಬಹುಜನರಿಂಗೆ ನಮಿಸುತಿದ್ದೆ. [೮೪]

ಅಂದು ಕಂಡೆನು ನಾನು
ಭಿಕ್ಷುಸಂಘವು ಬಳಸಿ ಬೆಂಬಡಿದನ
ಮಗಧದ ಪುರೋತ್ತಮ[3]ವ
ಪುಗುವಾ ಮಹಾವೀರ ಸಂಬುದ್ಧನ. [೮೫]

1. ಹಿರಿಯ ಭಿಕ್ಷು. 2. ಬಲಿಪೀಠ, ಪೂಜಾಸ್ಥಾನಗಳಲ್ಲಿ ಒಣಗಿದ ಹೂಗಳನ್ನು.
3. ರಾಜಗೃಹ.

೪. ನಿಕ್ಖಿಪಿತ್ವಾನ ಬ್ಯಾಭಙ್ಗಿಂ
ವನ್ದಿತುಂ ಉಪಸಙ್ಕಮಿಂ ।
ಮಮೇಽವ ಅನುಕಮ್ಪಾಯ
ಅಟ್ಠಾಸಿ ಪುರಿಸುತ್ತಮೋ ॥ [೫೬]

೫. ವನ್ದಿತ್ವಾ ಸತ್ಥುನೋ ಪಾದೇ
ಏಕಮನ್ತಂ ಠಿತೋ ತದಾ ।
ಪಬ್ಬಜ್ಜಂ ಅಹಮಾಯಾಚಿಂ
ಸಬ್ಬಸತ್ತಾನಮುತ್ತಮಂ ॥ [೫೭]

೬. ತತೋ ಕಾರುಣಿಕೋ ಸತ್ಥಾ
ಸಬ್ಬಲೋಕಾನುಕಮ್ಪಕೋ ।
ಏಹಿ ಭಿಕ್ಖೂಽತಿ ಮಂ ಆಹ
ಸಾ ಮೇ ಆಸುಽಪಸಮ್ಪದಾ ॥ [೫೮]

೭. ಸೋಽಹಂ ಏಕೋ ಅರಞ್ಞಸ್ಮಿಂ
ವಿಹರನ್ತೋ ಅತನ್ದಿತೋ ।
ಅಕಾಸಿಂ ಸತ್ಥುವಚನಂ
ಯಥಾ ಮಂ ಓವದೀ ಜಿನೋ ॥ [೫೯]

೮. ರತ್ತಿಯಾ ಪಠಮಂ ಯಾಮಂ
ಪುಬ್ಬಜಾತಿಮನುಸ್ಸರಿಂ ।
ರತ್ತಿಯಾ ಮಜ್ಝಿಮಂ ಯಾಮಂ
ದಿಬ್ಬಚಕ್ಖುಂ ವಿಸೋಧಿತಂ ।
ರತ್ತಿಯಾ ಪಚ್ಛಿಮೇ ಯಾಮೇ
ತಮೋಖನ್ಧಂ ಪದಾಲಯಿಂ ॥ [೬೦]

ಹೆಗಲಿನಡ್ಡೆಯನಾಗ
ಕೆಳಗಿರಿಸಿ ವಂದಿಸಲು ಬಳಿಸಾರಲು
ನನ್ನದೇ ಮೇಲಿನನು-
ಕಂಪನದಿ ನಿಂತನಾ ಪುರುಷೋತ್ತಮನು. [೮೬]

ವಂದನೆಗಳನು ಸಲಿಸಿ
ಗುರುಚರಣಗಳಿಗೊಂದು ಬಳಿಗೆ ನಿಂತು
ಸರ್ವಸತ್ತ್ವೋತ್ತಮನ
ಯಾಚಿಸಿದೆನಾನಾಗ ಪ್ರವ್ರಜ್ಯ[1]ವ. [೮೭]

ಕಾರುಣಿಕನವನದಕೆ
ಸರ್ವಲೋಕಾನುಕಂಪಕನಾದ ಗುರುವು
'ಬಾ ಭಿಕ್ಷು!'ವೆಂದೆನ್ನ
ನುಡಿಸಲಾಯ್ತೆನಗದುವೆ 'ಉಪಸಂಪದಾ'[2] [೮೮]

ಅಪ್ರಮತ್ತನೆ ಆಗಿ
ವಿಹರಿಸುತ ವನಗಳೊಳಗೇಕಾಕಿಯಾಗಿ
ಎನಗೆ ಜಿನನುಪದೇಶ-
ಗೈದ ಗುರುವಚನಗಳ ನಡೆದೆನಾನು. [೮೯]

ರಾತ್ರಿಯಾಯಿತು; ಮೊದಲ
ಯಾಮದಲಿ ನೆನಪಾಯ್ತು ಪೂರ್ವಜಾತಿ;
ಮಧ್ಯಮದ ಯಾಮದಲಿ
ಪರಿಶುದ್ಧವಾಯಿತ್ತೆ ದಿವ್ಯಚಕ್ಷು;
ಕಡೆಯ ಯಾಮಕೆ ಸಿಡಿದು
ಪುಡಿಯಾಯ್ತು ಕತ್ತಲೆಯ ದೊಡ್ಡ ಮೊತ್ತ. [೯೦]

1. ಭಿಕ್ಷುವಾಗಬೇಕೆಂದು ಮನೆ ಬಿಡುವ ಮೊದಲ ಹೆಜ್ಜೆ. 2. ಭಿಕ್ಷುವಾಗಿ ಸಂಘಕ್ಕೆ ಪ್ರವೇಶಿಸುವ ಎರಡನೆಯ ಹೆಜ್ಜೆ.

೯. ತತೋ ರತ್ಯಾ ವಿವಸನೇ
ಸುರಿಯುಸ್ಸುಗ್ಗಮನಂ ಪತಿ ।
ಇನ್ದೋ ಬ್ರಹ್ಮಾ ಚ ಆಗನ್ತ್ವಾ
ಮಂ ನಮಸ್ಸಿಂಸು ಪಞ್ಜಲೀ ॥ [೯೧]

೧೦. ನಮೋ ತೇ ಪುರಿಸಾಜಞ್ಞ
ನಮೋ ತೇ ಪುರಿಸುತ್ತಮ ।
ಯಸ್ಸ ತೇ ಆಸವಾ ಖೀಣಾ
ದಕ್ಖಿಣೇಯ್ಯೋಽಸಿ ಮಾರಿಸ ॥ [೯೨]

೧೧. ತತೋ ದಿಸ್ವಾನ ಮಂ ಸತ್ಥಾ
ದೇವಸಂಘಪುರಕ್ಖತಂ ।
ಸಿತಂ ಪಾತುಕರಿತ್ವಾನ
ಇಮಂ ಅತ್ಥಂ ಅಭಾಸಥ ॥ [೯೩]

೧೨. ತಪೇನ ಬ್ರಹ್ಮಚರಿಯೇನ
ಸಂಯಮೇನ ದಮೇನ ಚ ।
ಏತೇನ ಬ್ರಾಹ್ಮಣೋ ಹೋತಿ
ಏತಂ ಬ್ರಾಹ್ಮಣಮುತ್ತಮಂ ॥ [೯೪]

— ಥೇರಗಾಥಾ — ದ್ವಾದಸನಿಪಾತೋ — ಸುನೀತೋ.

## ೧೬. ರೋಹಿಣೀ ಥೇರೀ

೧. ಸಮಣಾ ತಿ ಭೋತಿ ಮಂ ವಿಪಸ್ಸಿ
ಸಮಣಾ ತಿ ಪಟಿಬುಜ್ಝಸಿ ।
ಸಮಣಾನಮೇವ ಕಿತ್ತೇಸಿ
ಸಮಣೀ ನೂನ ಭವಿಸ್ಸಸಿ ॥ [೯೫]

ಅಂದು ಕತ್ತಲೆ ಕರಗಿ
ಸೂರ್ಯನೇಳುವ ಮೊದಲಿನುದಯುಕಾಲದಲಿ
ಇಂದ್ರ ಬ್ರಹ್ಮರು ಬಂದು
ಬೊಗಸೆಗೈಗಳನೆತ್ತಿ ಪೊಡಮಟ್ಟರೆನಗೆ: [೯೧]

"ನಮಿಸುವೆವು ನಿನಗಿದೋ
ಪುರುಷ ಆಜಾನೇಯ! ಪುರುಷೋತ್ತಮಾ!
ನಿನ್ನಾಸ್ರವ[1]ಗಳೆಲ್ಲ
ಕ್ಷೀಣವೈ! ಮಾರಿಷ! ನೀ ದಕ್ಷಿಣಾರ್ಹ!" [೯೨]

ಇಂತು ದೇವರ ಸಂಘ
ಸುತ್ತಿ ಬಳಸಿದ ನನ್ನ ನೋಡಿ ಗುರುವು
ಮುಗುಳುನಗೆಯನು ಮೆರೆದು
ನುಡಿದನಹ ಅರ್ಥವಿಂತಾಗುವಂತೆ: [೯೩]

"ತಪದಿಂದ ದಮೆಯಿಂದ
ಬ್ರಹ್ಮಚರ್ಯವು ಮೇಣು ಸಂಯಮಗಳಿಂದ —
ಇವುಗಳಿಂದಲೆ ಪ್ರಾಪ್ತಿ
ಬ್ರಾಹ್ಮಣ್ಯ; ಬ್ರಾಹ್ಮಣೋತ್ತಮನಿವನೆ ತಾನೆ!" [೯೪]

## ೧೬. ಸ್ಥವಿರಿ ರೋಹಿಣಿ

"ಸವಣ ಎಂದೆನಗೆ ನೀ ತೋರಿಸುವೆ, ಭವತಿ!
ಸವಣನದೊ ಎಂದೆನ್ನನೆಚ್ಚರಿಸುವೆ;
ಸವಣರನೆ ಕೀರ್ತಿಸುವೆ ನೀ ಮೂರುವೇಳೆ
ಸವಣಿಯಾಗುವೆಯೇನು? ಹೇಳು. [೯೫]

1. ಆಸ್ರವಗಳ ನಾಶವೇ ನಿರ್ವಾಣ. ಅದೇ ಅರ್ಹತನ ಗುರಿ. ಹೆಚ್ಚು ಅರ್ಥಕ್ಕೆ 'ಪಾಲೀ ಸಾಹಿತ್ಯ ಪರಿಚಯ' ನೋಡಿ.

೨. ವಿಪುಲಂ ಅನ್ನಞ್ಚ ಪಾನಞ್ಚ
ಸಮಣಾನಂ ಪವೇಚ್ಛಸಿ ।
ರೋಹಿಣೀ ದಾನಿ ಪುಚ್ಛಾಮಿ
ಕೇನ ತೇ ಸಮಣಾ ಪಿಯಾ ॥ [೯೬]

೩. ಅಕಮ್ಮಕಾಮಾ ಅಲಸಾ
ಪರದತ್ತೋಪಜೀವಿನೋ ।
ಆಸಂಸುಕಾ ಸಾದುಕಾಮಾ
ಕೇನ ತೇ ಸಮಣಾ ಪಿಯಾ ॥ [೯೭]

೪. ಚಿರಸ್ಸಂ ವತ ಮಂ ತಾತ
ಸಮಣಾನಂ ಪರಿಪುಚ್ಛಸಿ ।
ತೇಸಂ ತೇ ಕಿತ್ತಯಿಸ್ಸಾಮಿ
ಪಞ್ಞಾಸೀಲಪರಕ್ಕಮಂ ॥ [೯೮]

೫. ಕಮ್ಮಕಾಮಾ ಅನಲಸಾ
ಕಮ್ಮಸೇಟ್ಠಸ್ಸ ಕಾರಕಾ ।
ರಾಗಂ ದೋಸಂ ಪಜಹನ್ತಿ
ತೇನ ಮೇ ಸಮಣಾ ಪಿಯಾ ॥ [೯೯]

೬. ತೀಣಿ ಪಾಪಸ್ಸ ಮೂಲಾನಿ
ಧುನನ್ತಿ ಸುಚಿಕಾರಿನೋ ।
ಸಬ್ಬಪಾಪಂ ಪಹೀನೇಽಸಂ
ತೇನ ಮೇ ಸಮಣಾ ಪಿಯಾ ॥ [೧೦೦]

"ವಿಪುಲವಾದನ್ನ ಪಾನಾದಿಗಳ ನೀ ನೀಡಿ
ಕೊಟ್ಟು ಕಳುಹುವೆ ಬಂದ ಸವಣರಿಂಗೆ;
ನಾನದನೆ ಕೇಳುವೆನು; ರೋಹಿಣಿ, ಹೇಳವ್ಮ
ಸವಣರಲಿ ಪ್ರೀತಿ ನಿನಗೇಕೆ? [೯೬]

"ಕರ್ಮಕಾಮಿಗಳಲ್ಲವವರು ಸೋಮಾರಿಗಳು,
ಪರರ ದಾನಗಳಿಂದ ಬದುಕುವವರು;
ಆಸೆ ಹೆಚ್ಚಿನ ಜನರು, ಸಿಹಿ ತಿನಿಸ ಬಯಸುವರು;
ಸವಣರಲಿ ಪ್ರೀತಿ ನಿನಗೇಕೆ?" [೯೭]

"ಸವಣರನು ಕುರಿತು ನೀ ಪ್ರಶ್ನೆ ಕೇಳುತಲಿರುವೆ
ಚಿರಕಾಲದಿಂದೆನ್ನ, ನನ್ನ ತಂದೆ!
ಅವರಾ ಪರಾಕ್ರಮು[1]ವನವರ ಪ್ರಜ್ಞಾ ಶೀಲ-
ಗಳನೀಗ ಕೀರ್ತಿಸುವೆನಾನು. [೯೮]

"ಕರ್ಮಕಾಮಿಗಳವರು, ಸೋಂಬರಲ್ಲವರು,
ಶ್ರೇಷ್ಠವಹ ಕರ್ಮಗಳ ಮಾಡುವವರು;
ರಾಗವನು ದ್ವೇಷವನು ಹೊರಗಟ್ಟಿದವರು—
ಸವಣರಲಿ ಪ್ರೀತಿ ನನಗದಕೆ. [೯೯]

"ಮೂತೆರದ ಪಾಪಗಳ ಮೂಲಗಳ ಕಳೆಯುತ್ತ
ಶುಚಿಯಾದ ಕರ್ಮಗಳ ಮಾಡುವವರು;
ಸರ್ವಪಾಪಗಳನ್ನು ಹಿಂದುಳಿಸಿ ಬಿಟ್ಟವರು—
ಸವಣರಲಿ ಪ್ರೀತಿ ನನಗದಕೆ. [೧೦೦]

1. ಧರ್ಮಪರಾಕ್ರಮ.

೭. ಕಾಯಕಮ್ಮಂ ಸುಚಿ ನೇಸಂ
ವಾಚೀಕಮ್ಮಞ್ಚ ತಾದಿಸಂ ।
ಮನೋಕಮ್ಮಂ ಸುಚಿ ನೇಸಂ
ತೇನ ಮೇ ಸಮಣಾ ಪಿಯಾ ॥ [೧೦೧]

೮. ವಿಮಲಾ ಸಂಖಮುತ್ತಾ ವ
ಸುದ್ಧಾ ಸನ್ತರಬಾಹಿರಾ ।
ಪುಣ್ಣಾ ಸುಕ್ಕಾನ ಧಮ್ಮಾನಂ
ತೇನ ಮೇ ಸಮಣಾ ಪಿಯಾ ॥ [೧೦೨]

೯. ಬಹುಸ್ಸುತಾ ಧಮ್ಮಧರಾ
ಅರಿಯಾ ಧಮ್ಮಜೀವಿನೋ ।
ಅತ್ಥಂ ಧಮ್ಮಞ್ಚ ದೇಸೇನ್ತಿ
ತೇನ ಮೇ ಸಮಣಾ ಪಿಯಾ ॥ [೧೦೩]

೧೦. ಬಹುಸ್ಸುತಾ ಧಮ್ಮಧರಾ
ಅರಿಯಾ ಧಮ್ಮಜೀವಿನೋ ।
ಏಕಗ್ಗಚಿತ್ತಾ ಸತಿಮನ್ತೋ
ತೇನ ಮೇ ಸಮಣಾ ಪಿಯಾ ॥ [೧೦೪]

೧೧. ದೂರಙ್ಗಮಾ ಸತಿಮನ್ತೋ
ಮನ್ತಭಾಣೀ ಅನುದ್ಧತಾ ।
ದುಕ್ಖಸ್ಸನ್ತಂ ಪಜಾನನ್ತಿ
ತೇನ ಮೇ ಸಮಣಾ ಪಿಯಾ ॥ [೧೦೫]

“ಅವರ ದೇಹದ ಕೆಲಸ ಶುಚಿಯೆಂತೊ ಅಂತೆಯೇ
ಅವರೆಸಗುವಾ ನುಡಿಯ ಕೆಲಸ ಕೂಡ;
ಅವರ ಮನಸಿನ ಕೆಲಸವದು ಕೂಡ ಶುಚಿಯಯ್ಯ—
ಸವಣರಲಿ ಪ್ರೀತಿ ನನಗದಕೆ. [೧೦೧]

“ಶಂಖದೊಲು ಮೌಕ್ತಿಕದವೋಲವರು ನಿರ್ಮಲರು,
ಒಳಗು ಹೊರಗುಗಳಲ್ಲಿ ಶುದ್ಧರವರು;
ಶುಕ್ಲ ಧರ್ಮ[1]ಗಳಿಂದ ಪರಿಪೂರ್ಣರಾದವರು—
ಸವಣರಲಿ ಪ್ರೀತಿ ನನಗದಕೆ. [೧೦೨]

“ಬಹಳ ತಿಳಿದವರವರು, ಧರ್ಮವನು ಧರಿಸಿದವ-
ರಾರ್ಯರೈ; ಜೀವಿಪರು ಧರ್ಮದಿಂದ;
ಅರ್ಥ[2]ವನು ಧರ್ಮವನು ಉಪದೇಶಗೈಯುವರು—
ಸವಣರಲಿ ಪ್ರೀತಿ ನನಗದಕೆ. [೧೦೩]

“ಬಹಳ ತಿಳಿದವರವರು, ಧರ್ಮವನು ಧರಿಸಿದವ-
ರಾರ್ಯರೈ; ಜೀವಿಪರು ಧರ್ಮದಿಂದ;
ಸ್ಮೃತಿಮಂತರೇಕಾಗ್ರಚಿತ್ತದವರವರು—
ಸವಣರಲಿ ಪ್ರೀತಿ ನನಗದಕೆ. [೧೦೪]

“ಸ್ಮೃತಿಮಂತರವರು ತಾವತಿದೂರ ಚರಿಸುವರು,
ಮಂತ್ರ ಹೇಳುವರವರಿಗೌದ್ಧತ್ಯ[3]ವಿಲ್ಲ;
ದುಃಖ ಕೊನೆಯಾಗುವುದ ಚೆನ್ನಾಗಿ ಬಲ್ಲವರು—
ಸವಣರಲಿ ಪ್ರೀತಿ ನನಗದಕೆ. [೧೦೫]

---

1. ಒಳ್ಳೆಯ ಗುಣ. 2. ಮೇಲಾದ ಗುರಿ. 3. ಎದೆಗುದಿ, ತಳಮಳ; ಔದ್ಧತ್ಯವಿಲ್ಲದಿರುವುದು ಶಾಂತಿ.

೧೨. ಯಮ್ಹಾ ಗಾಮಾ ಪಕ್ಕಮನ್ತಿ
ನ ವಿಲೋಕೇನ್ತಿ ಕಿಞ್ಚನಂ ।
ಅನಪೇಕ್ಖಾ ವ ಗಚ್ಛನ್ತಿ
ತೇನ ಮೇ ಸಮಣಾ ಪಿಯಾ ॥ [೧೦೬]

೧೩. ನ ತೇ ಸಂ ಕೋಟ್ಠೇ ಓಸೇನ್ತಿ
ನ ಕುಮ್ಭಿಂ ನ ಕಳೋಪಿಯಂ ।
ಪರಿನಿಟ್ಠಿತಮೇಸಾನಾ
ತೇನ ಮೇ ಸಮಣಾ ಪಿಯಾ ॥ [೧೦೭]

೧೪. ನ ತೇ ಹಿರಞ್ಞಂ ಗಣ್ಹನ್ತಿ
ನ ಸುವಣ್ಣಂ ನ ರೂಪಿಯಂ ।
ಪಚ್ಚುಪ್ಪನ್ನೇನ ಯಾಪೇನ್ತಿ
ತೇನ ಮೇ ಸಮಣಾ ಪಿಯಾ ॥ [೧೦೮]

೧೫. ನಾನಾಕುಲಾ ಪಬ್ಬಜಿತಾ
ನಾನಾಜನಪದೇಹಿ ಚ ।
ಅಞ್ಞಮಞ್ಞಂ ಪಿಯಾಯನ್ತಿ
ತೇನ ಮೇ ಸಮಣಾ ಪಿಯಾ ॥ [೧೦೯]

೧೬. ಅತ್ಥಾಯ ವತ ನೋ ಭೋತಿ
ಕುಲೇ ಜಾತಾ ಸಿ ರೋಹಿಣಿ ।
ಸದ್ಧಾ ಬುದ್ಧೇ ಚ ಧಮ್ಮೇ ಚ
ಸಂಘೇ ಚ ತಿಬ್ಬಗಾರವಾ ॥ [೧೧೦]

"ಅತ್ತಿತ್ತ ತಿರುಗದೆಯೆ ಅದನಿದನು ನೋಡದೆಯೆ
ಸಂಚಾರಗೆಯ್ವಾಗ ಗ್ರಾಮಗಳಲಿ
ಏನನೂ ಬಯಸದೆಯೆ ನಡೆದು ಹೋಗುವರವರು —
ಸವಣರಲಿ ಪ್ರೀತಿ ನನಗದಕೆ. [೧೦೬]

"ಕಣಜಗಳಲೇನವರು ಕೂಡಿಹಾಕುವರಲ್ಲ,
ಕುಡಿಕೆ ಮಡಿಕೆಗಳವರು ಶೇಖರಿಸರು;
ಪರಿಪೂರ್ಣವಾದುದನು[1] ಬಯಸುವವರವರು —
ಸವಣರಲಿ ಪ್ರೀತಿ ನನಗದಕೆ. [೧೦೭]

"ಹಣಕಾಸುಗಳನವರು ಸ್ವೀಕರಿಸರಂತೆಯೇ
ಚಿನ್ನ ಬೆಳ್ಳಿಗಳನ್ನು ತೆಗೆದುಕೊಳರು;
ಅಂದಂದನಂದಂದು ತಳ್ಳುವವರವರು—
ಸವಣರಲಿ ಪ್ರೀತಿ ನನಗದಕೆ. [೧೦೮]

"ಮನೆ ಬಿಟ್ಟು ನಡೆದವರು; ಅವರವರ ಜನಪದವು
ಬೇರೆಬೇರವರ ಕುಲ ಬೇರೆ ಬೇರೆ;
ಪ್ರೀತಿಯಿಂದಾಚರಿಪನೊಬ್ಬನೊಡನಿನ್ನೊಬ್ಬ—
ಸವಣರಲಿ ಪ್ರೀತಿ ನನಗದಕೆ." [೧೦೯]

"ರೋಹಿಣಿ, ನಮಗೆ ಹಿತವಾಗಲೆಂಬರ್ಥದಿಂ
ನಮ್ಮ ಕುಲದಲಿ, ಭವತಿ, ಜನಿಸಿದೆಯಲ!
ಬುದ್ಧನಲಿ ಧರ್ಮದಲಿ ಮೇಣು ಸಂಘದಿ ನಿನಗೆ
ಎಂ ಶ್ರದ್ಧೆ! ಗೌರವವು ತೀವ್ರ! [೧೧೦]

1. ನಿರ್ವಾಣವನ್ನು.

೧೭. ತುವಂ ಹೇತಂ ಪಜಾನಾಸಿ
ಪುಞ್ಞಕ್ಖೇತ್ತಂ ಅನುತ್ತರಂ ।
ಅಹಂ ಪಿ ಏತೇ ಸಮಣಾ
ಪಟಿಗಣ್ಹಾಮಿ ದಕ್ಖಿಣಂ ।
ಪತಿಟ್ಠಿತೊ ಹೇತ್ಥ ಯಞ್ಞೋ
ವಿಪುಲೋ ನೋ ಭವಿಸ್ಸತಿ ॥ [೧೧೧]

೧೮. ಸಚೇ ಭಾಯಸಿ ದುಕ್ಖಸ್ಸ
ಸಚೇ ತೇ ದುಕ್ಖಮಪ್ಪಿಯಂ ।
ಉಪೇಹಿ ಬುದ್ಧಂ ಸರಣಂ
ಧಮ್ಮಂ ಸಂಘಞ್ಚ ತಾದಿನಂ ।
ಸಮಾದಿಯಾಹಿ ಸೀಲಾನಿ
ತಂ ತೇ ಅತ್ಥಾಯ ಹೇಹಿತಿ ॥ [೧೧೨]

೧೯. ಉಪೇಮಿ ಬುದ್ಧಂ ಸರಣಂ
ಧಮ್ಮಂ ಸಂಘಞ್ಚ ತಾದಿನಂ ।
ಸಮಾದಿಯಾಮಿ ಸೀಲಾನಿ
ತಂ ಮೇ ಅತ್ಥಾಯ ಹೇಹಿತಿ ॥ [೧೧೩]

೨೦. ಬ್ರಹ್ಮಬನ್ಧು ಪುರೇ ಆಸಿಂ
ಸೋ ಇದಾನಿಮ್ಹಿ ಬ್ರಾಹ್ಮಣೋ ।
ತೇವಿಜ್ಜೋ ಸೋತ್ಥಿಯೋ ಚಮ್ಹಿ
ವೇದಗೂ ಚಮ್ಹಿ ನ್ಹಾತಕೋ ॥ [೧೧೪]

— ಥೇರೀಗಾಥಾ — ಪೀಸತಿನಿಪಾತೋ ರೋಹಿಣೀ.

“ಪುಣ್ಯಗಳಿಗುತ್ಕೃಷ್ಟ
ಭೂಮಿಯನು ಬಲ್ಲವಳು ನೀನೇ!
ದಾನಗಳ ನೀಡುವೆವು
ಸವಣರವರಿಗೆ ನಾವು ಕೂಡ!
ಇಲ್ಲಿ ನಿಲಿಸಿದರೆಮಗೆ
ದಾನಗಳ ಬಾಹುಳ್ಯವಹುದು!” [೧೧೧]

“ದುಃಖಕ್ಕೆ ಹೆದರಿದರೆ,
ಪ್ರಿಯವಲ್ಲದಿರೆ ದುಃಖ ನಿನಗೆ,
ಬುದ್ಧನನು, ಧರ್ಮವನು,
ಸಂಘವವನದ ನೀನು ಸಾರು;
ಶೀಲಗಳ ನೀ ನಡಸು;
ಹಿತವಪ್ಪುದದರಿಂದ ನಿನಗೆ.” [೧೧೨]

“ಬುದ್ಧನನು, ಧರ್ಮವನು,
ಸಂಘವವನದ ನಾನು ಸಾರಿ,
ಶೀಲಗಳ ನಡಸುವೆನು;
ಹಿತವಪ್ಪುದದರಿಂದ ನನಗೆ. [೧೧೩]

“ಪೂರ್ವದಲಿ ನಾ ಬ್ರಹ್ಮಬಂಧು[1]ವಾಗಿದ್ದೆನೈ,
ಇಂದು ನಾ ಬ್ರಾಹ್ಮಣನೆ ಆಗಿರುವೆನು;
ಮೂರು ವಿದ್ಯೆ[2]ವ ಪಡೆದು ಶ್ರೋತ್ರಿಯ[3]ನೆ ಆಗಿರುವೆ
ಸ್ನಾನ ಗೈದವನಾಗಿ[4] ವೇದ[5] ತಿಳಿದು.” [೧೧೪]

---

1. ಹೆಸರಿಗೆ ಮಾತ್ರ ಬ್ರಾಹ್ಮಣನಾದವನು. 2. ಋಕ್, ಸಾಮ, ಯಜುರ್ವೇದಗಳಲ್ಲ; ಪೂರ್ವನಿವಾಸಾನುಸ್ಮೃತಿ ಜ್ಞಾನ, ಸತ್ತ್ವಗಳ ಚ್ಯುತೋಪಪಾತ ಜ್ಞಾನ, ಆಸ್ರವಕ್ಷಯ ಜ್ಞಾನ ಎಂಬ ಮೂರು ವಿದ್ಯೆ. 3. ಬುದ್ಧಶಾಸನ ತಿಳಿದವನು, ಶ್ರುತವಂತ. 4. ನಾಲ್ಕು ಆರ್ಯ ಸತ್ಯಗಳ ಅರಿವೆಂಬ ಸ್ನಾನದಿಂದ ರಾಗ, ದ್ವೇಷ, ಮೋಹಗಳೆಂಬ ಕೊಳೆಯನ್ನು ತೆಗೆದು. 5. ಪುಟ ೨೪, ೨.

## ೧೭. ದನ್ತಿಕಾ ನಾಮ ಥೇರೀ

೧. ದಿವಾವಿಹಾರಾ ನಿಕ್ಖಮ್ಮ
ಗಿಜ್ಝಕೂಟಮ್ಹಿ ಪಬ್ಬತೇ ।
ನಾಗಂ ಓಗಾಹಮುತ್ತಿಣ್ಣಂ
ನದೀತೀರಮ್ಹಿ ಅದ್ದಸಂ ॥ [೧೧೫]

೨. ಪುರಿಸೋ ಅಙ್ಕುಸಮಾದಾಯ
ದೇಹಿ ಪಾದನ್ತಿ ಯಾಚತಿ ।
ನಾಗೋ ಪಸಾರಯಿ ಪಾದಂ
ಪುರಿಸೋ ನಾಗಮಾರುಹಿ ॥ [೧೧೬]

೩. ದಿಸ್ವಾ ಅದನ್ತಂ ದಮಿತಂ
ಮನುಸ್ಸಾನಂ ವಸಂ ಗತಂ ।
ತತೋ ಚಿತ್ತಂ ಸಮಾಧೇಮಿ
ಖಲು ತಾಯ ವನಂ ಗತಾ ॥ [೧೧೭]

— ಥೇರೀಗಾಥಾ — ಛಕ್ಕನಿಪಾತೋ — ದನ್ತಿಕಾ.

## ೧೮. ಪಟಾಚಾರಾ ನಾಮ ಥೇರೀ

೧. ನಙ್ಗಲೇಹಿ ಕಸಂ ಖೇತ್ತಂ
ಬೀಜಾನಿ ಪವಪಂ ಛಮಾ ।
ಪುತ್ತದಾರಾನಿ ಪೋಸೇನ್ತಾ
ಧನಂ ವಿನ್ದನ್ತಿ ಮಾನವಾ ॥ [೧೧೮]

## ೧೭. ದಂತಿಕಾ ಎಂಬ ಸ್ಥವಿರಿ

ಹಗಲು ವಿಹಾರ[1]ವ ಮುಗಿಸಿ ಹೊರಟು ನಾ
ಗೃಧ್ರಕೂಟಪರ್ವತದಿಂದ
ನದಿಯ ತೀರದಲಿ ಕಂಡೆ ನೀರಿನಲಿ
ಮಿಂದು ಮೇಲೆ ಬರುವಾನೆಯನು. [೧೧೫]

ಪುರುಷನಂಕುಶವ ತೆಗೆದುಕೊಂಡು 'ಕೊಡು
ಪಾದ'ವೆಂದು ತಾ ಕೇಳಿದನು;
ತನ್ನ ಪಾದವನ್ನಾನೆ ಪಸರಿಸಿತು,
ಪುರುಷನಾನೆಯುದನೇರಿದನು. [೧೧೬]

ದಮನವಾಗದುದು ದಮನವಾದುದನು
ಮಾನವನಿಗೆ ವಶವಾದುದನು
ಕಂಡು ವನಕೆ ನಡೆದಾಗ ಚಿತ್ತವನು
ತಂದು ಸಮಾಧಿಗೆ ನಿಲಿಸಿದೆನು. [೧೧೭]

## ೧೮. ಪಟಾಚಾರ ಎಂಬ ಸ್ಥವಿರಿ

ನೇಗಿಲಿನ ಬಲದಿಂದ ಹೊಲಗದ್ದೆಗಳನುತ್ತು
ಭೂಮಿಯಲಿ ಬೀಜ ಬಿತ್ತಿ,
ಆರ್ಜಿಸಿದ ಧನವನನುಭವಿಸುವರು; ಮಾನವರು
ಸತಿಸುತರ ಪೋಷಿಸುವರು. [೧೧೮]

---

1. ಮಧ್ಯಾಹ್ನ ಊಟವಾದ ಮೇಲೆ ಏಕಾಂತದಲ್ಲಿ ಕುಳಿತು ಧ್ಯಾನಮಾಡುವುದು.

೨. ಕಿಮಹಂ ಸೀಲಸಮ್ಪನ್ನಾ
ಸತ್ಥುಸಾಸನಕಾರಿಕಾ ।
ನಿಬ್ಬಾನಂ ನಾಧಿಗಚ್ಛಾಮಿ
ಅಕುಸೀತಾ ಅನುದ್ಧಟಾ ॥ [೧೧೯]

೩. ಪಾದೇ ಪಕ್ಖಾಲಯಿತ್ವಾನ
ಉದಕೇ ಸು ಕರೋಮಽಹಂ ।
ಪಾದೋದಕಞ್ಚ ದಿಸ್ವಾನ
ಥಲತೋ ನಿನ್ನಮಾಗತಂ ।
ತತೋ ಚಿತ್ತಂ ಸಮಾಧೇಮಿ
ಅಸ್ಸಂ ಭದ್ರಂ ವ ಜಾನಿಯಂ ॥ [೧೨೦]

೪. ತತೋ ದೀಪಂ ಗಹೇತ್ವಾನ
ವಿಹಾರಂ ಪಾವಿಸಿಂ ಅಹಂ ।
ಸೇಯ್ಯಂ ಓಲೋಕಯಿತ್ವಾನ
ಮಞ್ಚಕಮ್ಹಿ ಉಪಾವಿಸಿಂ ॥ [೧೨೧]

೫. ತತೋ ಸೂಚಿಂ ಗಹೇತ್ವಾನ
ವಟ್ಟಿಂ ಓಕಸ್ಸಯಾಮಽಹಂ ।
ಪದೀಪಸ್ಸೇವ ನಿಬ್ಬಾನಂ
ವಿಮೋಕ್ಖೋ ಅಹು ಚೇತಸೋ ॥ [೧೨೨]

— ಥೇರೀಗಾಥಾ — ಪಞ್ಚನಿಪಾತೋ — ಪಟಾಚಾರಾ.

[ಪಾಲಿ ಪಜ್ಜ ಪುಪ್ಫಂಜಲಿ ನಿಟ್ಠಿತಂ.]

ನಾ ಶೀಲಸಂಪನ್ನೆ, ಗುರುಶಾಸನವ ನಡಸಿ
ಸೋಮಾರಿಯಲ್ಲದವಳು,
ಔದ್ಧತ್ಯವಿಲ್ಲದವಳಾನೇಕೆ ಬಳಿಸಾರಿ
ಸೇರೆನ್ನೈ ನಿರ್ವಾಣವ! [೧೧೯]

ಕಾಲು ತೊಳೆಯುತ ಜಲದಿ
ನಾ ತೊಳೆದ ನೀರಾಗ
ಮೇಲಿಂದ ಹಳ್ಳಕ್ಕೆ ಬಹುದ ಕಂಡು
ನಾ ಸಮಾಧಿಯೊಳಾಗ
ಚಿತ್ತವನು ನಿಲಿಸಿದೆನು
ಭದ್ರಾಶ್ವವನು ಹಿಡಿದು ಕಲಿಸುವಂತೆ [೧೨೦]

ನಾ ವಿಹಾರವನಾಗ ನಡೆದೆನೊಳಹೊಕ್ಕು
ಕೈಲೊಂದು ದೀಪ ಕೊಂಡು;
ಮೇಲಾವುದದನು ಮೇಣ್ ಅವಲೋಕಿಸುತ್ತೆ
ಮಂಚಕದ ಮೇಲೆ ಕುಳಿತೆ. [೧೨೧]

ಆಗ ಸೂಜಿಯ ಹಿಡಿದು
ಬತ್ತಿಯನು ಕೆಳಗೆಳೆದೆನು!
ಬೆಳಕಿನದೆ ನಿರ್ವಾಣ!
ಮನಸು ಮೋಕ್ಷವ ಪಡೆಯಿತು! [೧೨೨]

[ಪಾಲೀ ಪದ್ಯ ಪುಷ್ಪಾಂಜಲಿ ಮುಗಿಯಿತು.]